# ಚಂದಮಾಮ

ಮಕ್ಕಳ ಕಥೆಯ ಮಾಸಪತ್ರಿಕೆ



Photo by Sundaramoorthy



ಬಹುಮಾನ
ಪಡೆದ ಶೀರ್ಷಿಕೆ

ನಿಂತಲ್ಲಿ ನಿಲ್ಲಲಾರೆ

ಕಳಿಸಿದವರು:
ಕೆ. ಎಲ್. ಎನ್. ಮಲ್ಯ






J.B. MANGHARAM'S
NOURISHING
Biscuits
NOURISHING
Biscuits
J.B. MANGHARAM & CO.

# ನಮ್ಮ ದೀಪಾವಳಿ ವಿಶೇಷಾಂಕ ಪ್ರಕಾಶನಕ್ಕೆ

ಸಹಕರಿಸಿದ ಎಲ್ಲರಿಗೂ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳನ್ನು ನಿವೇದಿಸಿಕೊಳ್ಳುತ್ತೇವೆ.



ಅದರೊಂದಿಗೇ

★ ತಮ್ಮ ಆರ್ಡರುಗಳ ಪ್ರಕಾರ ಪೂರ್ಣ ಪ್ರತಿಗಳನ್ನು ವಿನಿಯೋಗಿಸಲಾರದೆ ಹೋದುದಕ್ಕೆ **ನಮ್ಮ ಏಜೆಂಟರೂ,**

★ ಈ ವಿಶೇಷಾಂಕದೊಂದಿಗೆ ಚಂದಾದಾರಿಕೆಯನ್ನು ಪ್ರಾರಂಭಿಸಲಾರಧೆ ಹೋದುದಕ್ಕೆ **ನಮ್ಮ ಹೊಸ ಚಂದಾದಾರರೂ,**

★ ತಮ್ಮ ಜಾಹೀರಾತುಗಳಿಗೆ ಈ ಸಂಚಿಕೆಯಲ್ಲಿ ಅವಕಾಶ ಕಲ್ಪಿಸಲಾಗದುದಕ್ಕೆ ನಮ್ಮ ಅಭಿಮಾನಿಗಳಾದ **ಜಾಹೀರಾತುದಾರರೂ**

**ಅನ್ಯಥಾ ಭಾವಿಸಬಾರದೆಂದು ಕೇಳಿಕೊಳ್ಳುತ್ತೇವೆ.**

ಇನ್ನುಮುಂದೆ ಎಲ್ಲರಿಗೂ ಇತೋಪ್ಯತಿಶಯವಾಗಿ ಸೇವೆಸಲ್ಲಿಸಬಲ್ಲೆವೆಂದು ಭರವಸೆಯಾಗಿ ಬಿನ್ನವಿಸಿಕೊಳ್ಳುತ್ತೇವೆ.



## ಚಂದಮಾಮ ಪಬ್ಲಿಕೇಷನ್ಸ್

ಚಂದಮಾಮ ಬಿಲ್ಡಿಂಗ್ಸ್, ಮದರಾಸು – 26.



## ಈ ಸಂಚಿಕೆಯಲ್ಲಿ



ಅಲ್ಲದೆ ಮಾಮೂಲಿನಂತೆ ಚಂದ್ರ, ಫೋಟೋ ಶೀರ್ಷಿಕೆಯ ಸ್ಪರ್ಧೆ, ವಾರ್ತೆಗಳು—ವಿಶೇಷಗಳು ಚಿತ್ರಕಥೆ ಎಲ್ಲಾ ಇವೆ.

# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

"ಚಂದಮಾಮ"ನ ಧ್ಯೇಯವನ್ನೂ, ಅದಕ್ಕೆ ತಕ್ಕ ಕೃತಿಗಳನ್ನೂ ಅಭಿನಂದಿಸಿ ನೀವು ಬರೆದ, ಕಾಗದಗಳು ನಮಗೆ ಸೇರಿವೆ. ಇದರಲ್ಲೇನೂ ಆಶ್ಚರ್ಯವಿಲ್ಲ. ಕಥೆಗಳೆಂದರೆ ಕಿರಿಯರಿಗೆ ಹಿರಿಯರಿಗೆ ಮಕ್ಕಳಿಗೆ ಮುದುಕರಿಗೆ ಎಲ್ಲರಿಗೂ ಅತ್ಯಂತ ಪ್ರಿಯವೇ. ಆದುದರಿಂದಲೇ ಪ್ರಾಚೀನಕಾಲದ ವೇದಗಳಿಂದ ಹಿಡಿದು ಆಧುನಿಕಕಾಲದವರೆಗೂ ಕಥೆಗಳು ಜೀವಂತವಾಗಿವೆ. ಕಥೆಗಳಿಂದಲೇ ಪಂಚತಂತ್ರದ ರಾಜಕುಮಾರರು ಬುದ್ಧಿವಂತರಾದುದನ್ನು ಅರಿತಿದ್ದೇವೆ. ಮಿದುಳಿಗೆ ಬೇಸರವೀಯದ, ಪೋಷಕವಾದ ಆಹಾರ ವಸ್ತುಗಳು ಕಥೆಗಳಲ್ಲಿ ಅಡಗಿವೆ. ಕಥೆಗಳನ್ನು ಓದಿ ಅದನ್ನು ಕುರಿತು ಯೋಚನೆಮಾಡಿದರೆ ಅದರೊಳಗಿನ ತತ್ವವು ಬೋಧೆಯಾಗಿಬಿಡುತ್ತದೆ. ಕೆಲವು ಕಥೆಗಳು ಓದಿದ ಕೂಡಲೇ ಅರ್ಥವಾಗುತ್ತವೆ; ಇನ್ನು ಕೆಲವು ವಿಚಾರವನ್ನು ಮುಂದುವರಿಯಿಸುತ್ತವೆ; ಕೆಲವು ಮನವರಳಿಸುತ್ತವೆ. ಹೀಗೆ "ಚಂದಮಾಮ" ಬೆಳಗಿ, ನೀವೂ ಬೆಳಗಿ ಬಳೆಯಿರಿ.

ಸಂಪುಟ ೧೩ : ಡಿಸೆಂಬರ್ ೧೯೫೪ : ಸಂಚಿಕೆ ೬





CHITRA

# ಧನ-ದುಡಿಮೆ

ಮಾನವರ ಕುಟುಂಬಕೆಲ್ಲ
ಮಾನವಿತ್ತು ನುಂಗಿ ಕಾವ
ನಾನಾ ವಿಧದುಡುಗೆ ಹೊಲಿಯ
ಬಲ್ಲ ದರ್ಜಿತಾಂ

ಗಾನದಂತೆ ಸದಾ ಮಿಷನಿ
ನಾ ನಾದಕೆ ತನ್ನ ಸಿಳ್ಳಿ
ನಾ ನಾದವ ಬೆರೆಸಿಯುಹ
ರ್ನಿಶಿಯುಂ ದುಡಿವಂ.





ಪಕ್ಕದ ಅಂಗಡಿಯಲಿರುವ
ತಕ್ಕಡಿಯಾ ವಣಿಕ ಹಗಲು
ಲೆಕ್ಕದ ವ್ಯಾಪಾರ ಮಾಡಿ
ರಾತ್ರಿಯೆಲ್ಲವೂ,

ಪಕ್ಕದವನ ನಾದದಿಂದ
ತಕ್ಕಡಿಯೋಲ್ ತಲೆಯತೂಗಿ
ಚೊಕ್ಕ ನಿದ್ರೆ ಗೇನುಪಾಯ
ವೆಂದು ಚಿಂತಿಸಿ,

'ಧನಿಕ ನಾನು, ಧನವ ಕೊಟ್ಟು
ತಿನಸು ಧಾನ್ಯ ವಸ್ತ್ರದಂತೆ
ಇನಿಯ ನಿದ್ರೆ ಕೊಂಬೆನೆ'ಂದು
ಕರೆದು ದರ್ಜಿಯಂ





"ಮಾರಂಗ"

ಸುತ್ತುಮುತ್ತು ಕಳ್ಳರೆನ್ನ
ಒತ್ತುತಿಹರು ಎಂಬ ಭೀತಿ
ಮುತ್ತಿಕೊಳಲ್, ದರ್ಜಿ ಇಂಥ
ಬೆದರು ಬಾಳಿಗೆ,

ವಿತ್ತದ ಕಾರಣವ ನರಿತು
ಎತ್ತಿಕೊಂಡು ಒಯ್ದು ಹೊನ್ನ
ಮತ್ತೆ ವಣಿಜಗಿತ್ತು ದೀನ
ನಾಗಿ ಬೇಡಿದ:
"ಮರಳಿ ನಿಮ್ಮ ಹೊನ್ನಕೊಂಡು
ತಿರುಗಿ ಕೊಡಿರಿ ಎನ್ನ ದುಡಿಮೆ,
ಮರೆಯೆ ನಿಮ್ಮ ನಿಂದು ಮುಂದು
ಎಂದಿಗುಂ ನಿಜಂ!"

'ಹಣವ ಗಳಿಸೆ ಹಗಲು ಇರಳು
ಕಣವು ಬಿಡದೆ ದುಡಿದು ದುಡಿದು
ಹೆಣವಾಗುವೆ ಪಾಪ, ಹಿಡಿ
ಸುವರ್ಣ ಸಾವಿರ!'

ಎಂದು ನೀಡೆ, ಹೊನ್ನು ತುಂಬ
ಒಂದೆಬಾರಿ ಕೈಗೆ ದೊರೆತ
ಅಂದ ನೋಟದಿಂದ ಉಬ್ಬಿ
ದೀನ ದರ್ಜಿ ತಾಂ

ಅಂದಿನಿಂದ ದುಡಿಮೆಬಿಟ್ಟು
ಬಂದ ಹೊನ್ನ ಭದ್ರಮಾಡಿ
ಮಂದನಾಗಿ ಕುಳಿತ, ಮೇಣು
ಕೆಲವು ದಿನದಲೇ,



## ಮು ಖ ಚಿ ತ್ರ

ಅರಣ್ಯವಾಸ ಮಾಡುತ್ತಿರುವ ಪಾಂಡವರು, ಅಲ್ಲಲ್ಲಿರುವ ಪುಣ್ಯತೀರ್ಥಗಳನ್ನು ಸಂದರ್ಶನಮಾಡುತ್ತಾ, ಹಿಂದೆ ಶಿಬಿ ಚಕ್ರವರ್ತಿ ಯಜ್ಞಮಾಡಿದ ಸ್ಥಳವನ್ನು ನೋಡಿದರು. ರೋಮಶಋಷಿ ಶಿಬಿಚರಿತ್ರೆಯನ್ನು ಧರ್ಮರಾಯನಿಗೆ ವಿವರಿಸಿದನು :

ಚಂದ್ರಕುಲಾವತಂಸನಾದ ಶಿಬಿ ಅನೇಕ ಯಜ್ಞಗಳನ್ನು ಮಾಡುತ್ತಿರುವಾಗ ಒಂದು ದಿನ ಒಂದು ವಿಚಿತ್ರವು ನಡೆಯಿತು: ಆಕಸ್ಮಿಕವಾಗಿ ಹಾರಿಬಂದ ಕೋಮಲನಾದ ಪಾರಿವಾಳವೊಂದು ಶಿಬಿಚಕ್ರವರ್ತಿಯ ಅಂಗೈಯಲ್ಲಿ ಬಿದ್ದಿತು. ಅದು ಪ್ರಾಣಭಯದಿಂದ "ರಾಜಾ, ನನ್ನನ್ನು ರಕ್ಷಿಸು, ರಕ್ಷಿಸು" ಎಂದು ಅಂಗಲಾಚಿತು. "ಹೆದರಬೇಡ, ರಕ್ಷಿಸಿದ್ದೇನೆ" ಎಂದು ಅಭಯದಾನ ಮಾಡಿದ ಶಿಬಿ.

ಅಷ್ಟರಲ್ಲಿ ಭಯಂಕರಾಕಾರನಾದ ಬೇಡ ನೊಬ್ಬನು ಶಿಬಿಯ ಇದಿರು ಬಂದು ನಿಂತು—"ರಾಜೇಂದ್ರ, ಅದು ನಾನು ಬೇಟೆಯಾಡಿದ ಪಾರಿವಾಳ. ನನ್ನದು. ಅದನ್ನು ನನಗೆ ಒಪ್ಪಿಸು" ಎಂದು ಕೇಳಿದ. "ಇದಕ್ಕೆ ನಾನು ಅಭಯದಾನ ಮಾಡಿದ್ದೇನೆ. ಇದಕ್ಕೆ ಬದುಲು ಬೇರೇನಾದರೂ ಕೇಳು" ಎಂದ ಅರಸ.

"ಈ ಪಾರಿವಾಳದ ಮಾಂಸಕ್ಕೆ ಸಮಾನನಾದುದು ರಾಜನಾದ ನಿನ್ನ ಮಾಂಸವೇ ಹೊರತು ಮತ್ತಾವುದೂ ಈ ಪ್ರಪಂಚದಲ್ಲಿಲ್ಲ. ಆದುದರಿಂದ ದಯಮಾಡಿ ಪಾರಿವಾಳವನ್ನು ಕೊಟ್ಟುಬಿಡಿ" ಎಂದ ಬೇಡ.

"ಹಾಗಾದರೆ ಈ ಪಾರಿವಾಳದಷ್ಟೇ ತೂಕ ನನ್ನ ಮಾಂಸ ಕೊಡುತ್ತೇನೆ" ಎಂದು ಶಿಬಿಚಕ್ರವರ್ತಿ ಸ್ವಲ್ಪವೂ ಜಂಕದೆ ತಕ್ಕಡಿಯನ್ನು ತರಿಸಿದ. ಒಂದರಲ್ಲಿ ಪಾರಿವಾಳವನ್ನಿಟ್ಟು, ಕತ್ತಿಯಿಂದ ತಾನೇ ತನ್ನ ದೇಹದ ಮಾಂಸವನ್ನು ಕೊಯ್ದು ಕೊಯ್ದು ಇನ್ನೊಂದು ತಕ್ಕಡಿಗೆ ತುಂಬಿದ. ಎಲ್ಲರೂ ಈ ಆಶ್ಚರ್ಯವನ್ನು ನೋಡುತ್ತಿರಲು, ಎಷ್ಟುಮಾಂಸ ತುಂಬಿದರೂ ಆ ಪಾರಿವಾಳಕ್ಕೆ ಸಮಾನವಾಗದೇ ಹೋಯಿತು. "ಬೇಡನೆ, ನೀನೇ ಈ ತಕ್ಕಡಿಯನ್ನು ಹಿಡಿ; ನಾನೇ ಇದರಲ್ಲಿ ಕೂಡುತ್ತೇನೆ" ಎಂದು ಶಿಬಿಚಕ್ರವರ್ತಿ ಬೇಡನ ಕೈಗೆ ತಕ್ಕಡಿಯನ್ನು ಒಪ್ಪಿಸುವಾಗ,

ಬೇಡನು ಸಾಕ್ಷಾತ್ ದೇವೇಂದ್ರನಾಗಿ ನಿಂತುಬಿಟ್ಟ! ಪಾರಿವಾಳವು ಅಗ್ನಿದೇವನಾಗಿ ಪ್ರತ್ಯಕ್ಷನಾದ!!

"ಶಿಬಿಮಹಾಶಯಾ, ನಿನ್ನ ಸ್ಥೈರ್ಯವನ್ನು ಪರೀಕ್ಷಿಸಲು ನಾವು ಬಂದೆವು. ನಿನ್ನ ದೇಹ ಮೊದಲಿನಂತಾಗಲಿ. ನಿನ್ನ ಕೀರ್ತಿ ಚಿರಸ್ಥಾಯಿಯಾಗಲಿ!" ಎಂದು ಅನುಗ್ರಹಿಸಿ ಆ ದೇವತೆಗಳು ಮಾಯವಾದರು.




ಒಂದಾನೊಂದು ಕಾಲದಲ್ಲಿ ಬಂದೇಲ್ ಖಂಡವನ್ನು ಪ್ರಸಿದ್ಧರಾದ ಠಾಕೂರ್‌ವಂಶದವರು ಆಳುತ್ತಿದ್ದರು. ಆ ವಂಶಕ್ಕೆ ಸೇರಿದ ರೂಪಸಿಂಹ ಎಂಬಾತನು ಕಡುಬಡವನಾಗಿದ್ದನು. ಆತನಿಗೆ ಧನವಾಗಲೀ, ಆಸ್ತಿಯಾಗಲೀ, ಬಂಧುಬಳಗವಾಗಲೀ ಇರಲಿಲ್ಲ. ಅವನ ಸಕಲಸಂಪತ್ತೆಂದರೆ ಚಿಂದಿಚಿಂದಿಯಾಗಿದ್ದ ಬಟ್ಟೆಗಳು, ಎರಡು ಗೋಣಿಚೀಲ ಮತ್ತು ಒಂದು ಕೊಡಲಿ ಮಾತ್ರ.

ಈ ಕೊಡಲಿಯಿಂದ ರೂಪಸಿಂಹನು ಬೆಳಗ್ಗಿನಿಂದ ಮಧ್ಯಾಹ್ನದ ತನಕ ಕಾಡಿನಲ್ಲಿ ಸೌದೆ ಸೀಳಿ ಅದನ್ನು ಮೂರು ರೂಪಾಯಿಗಳಿಗೆ ಮಾರುತ್ತಿದ್ದ. ಅದರಲ್ಲಿ ಎರಡು ರೂಪಾಯಿಗಳನ್ನು ಖರ್ಚುಮಾಡಿ ಅಗಸರಿಂದ ರಾಜರ ದಿರಿಸನ್ನು ಬಾಡಿಗೆಗೆ ಪಡೆಯುವನು. ಉಳಿದೊಂದು ರೂಪಾಯಿಗೆ ಕುದುರೆಯನ್ನು ಬಾಡಿಗೆಗೆ ತೆಗೆದುಕೊಳ್ಳುವನು. ಆ ಬಟ್ಟೆ ಧರಿಸಿ, ಆ ಕುದುರೆಯನ್ನು ಹತ್ತಿ ವಾಯುವೇಗದಿಂದ ನಗರದ ಬೀದಿಗಳಲ್ಲಿ ರಾಜಠೀವಿಯಿಂದ ಸವಾರಿ ಹೊರಡುವನು. ಯುವಕನೂ ಸುಂದರನೂ ಆಗಿದ್ದ ಆತನನ್ನು ನೋಡಿ ಎಲ್ಲರೂ ಆತನು ಯಾರೋ ಒಬ್ಬ ರಾಜಕುಮಾರನಿರಬೇಕೆಂದು ತಿಳಿದರು. ಈ ರೀತಿಯಾಗಿ ರೂಪಸಿಂಹನು ಪ್ರತಿನಿತ್ಯವೂ ಠಾಕೂರ್‌ರಾಜವಂಶದ ರಾಜಗೌರವವನ್ನು ಕಾಪಾಡಿ ಕತ್ತಲಾಗುತ್ತಲೇ ತಾನು ಬಾಡಿಗೆಗೆ ಪಡೆಯುತ್ತಿದ್ದ ಬಟ್ಟೆ ಮತ್ತು ಕುದುರೆಯನ್ನು ಹಿಂತಿರುಗಿಸುತ್ತಿದ್ದ. ಅನಂತರ ಮೂಮೂಲು ಚಿಂದಿ ಹಾಕಿಕೊಂಡು ಚಿಲ್ಲರೆ ಹಣದಿಂದ ಕಡಲೆಪುರಿ ತಿಂದು, ಒಂದಿಷ್ಟು ಸೀನೀರು ಕುಡಿದು, ಒಂದು ಗೋಣಿಯನ್ನು ಹಾಸಿ, ಮತ್ತೊಂದನ್ನು ಹೊದ್ದುಕೊಂಡು ನಿದ್ದೆಮಾಡುತ್ತಿದ್ದ. ದಿನಾ ಇದೇ ರೀತಿ.

ಒಂದುದಿನ ರೂಪಸಿಂಹನು ಕಾಡಿನಲ್ಲಿ ಸೌದೆ ಸೀಳುತ್ತಿರುವಾಗ ಆತನಿಗೆ ಸಮೀಪದಲ್ಲೇ ಎಲ್ಲಿಂದಲೋ ಪರಿಮಳಭರಿತವಾದ ವಾಸನೆ ಬಂತು. ವಾಸನೆ ಬರುತ್ತಿದ್ದ ದಿಕ್ಕಿನಲ್ಲೇ ಹೋಗಲು, ಆತನಿಗೆ ಶ್ರೀಗಂಧದ

ಪಿ. ಪಿ. ಶಿವತಾಯ



ಮರವೊಂದು ಕಾಣಿಸಿತು. ರೂಪಸಿಂಹನು ಗಂಧದ ಕೊರಡನ್ನು ಕೊಡಲಿಯಿಂದ ಕತ್ತರಿಸಿ ತೆಗೆದು ಎಂದಿನಂತೆ ಸೌದೆ ಹೊತ್ತುಕೊಂಡು ನಗರಕ್ಕೆ ವಾಪಸುಬಂದ. ಆ ಸಾಯಂಕಾಲ ರಾಜನಂತೆ ಬಟ್ಟೆ ಧರಿಸಿ, ಕುದುರೆಯನ್ನೇರಿ ವಾಯುವೇಗದಿಂದ ಸವಾರಿ ಹೊರಟ. ಆ ನಗರದ ಚೌಕದಲ್ಲಿ ಪರದೇಶಿಯೊಬ್ಬನು ಆತನ ದಾರಿಗೆ ಅಡ್ಡಗಟ್ಟಿ, "ನಮಸ್ಕಾರ ಮಹಾಪ್ರಭು" ಎಂದ.

"ಯಾರಯ್ಯಾ, ನೀನು?" ಎಂದು ಕೇಳಿದ ರೂಪಸಿಂಹ ಠೀವಿಯಿಂದ. "ಪ್ರಭೂ, ನಾನೊಬ್ಬ ವ್ಯಾಪಾರಿ. ಇಲ್ಲಿ ವ್ಯಾಪಾರ ಮುಗಿಸಿಕೊಂಡು ಸಿಂಹಳದಕಡೆ ಹೊರಟಿರುವೆನು" ಎಂದು ಮನವಿಮಾಡಿದ ಆ ಪರದೇಶಿ.



ರೂಪಸಿಂಹನು ಕೊಂಚ ಆಲೋಚಿಸಿ ತನ್ನ ಕಿಸೆಯಲ್ಲಿದ್ದ ಶ್ರೀಗಂಧದ ಚಕ್ಕೆಯನ್ನು ಪರದೇಶಿಗೆ ಕೊಡುತ್ತಾ "ಠಾಕೂರ್ ರೂಪಸಿಂಗರ ಕಾಣಿಕೆ ಇದೆಂದು ಸಿಂಹಳದ ರಾಜನಿಗೆ ತಲುಪಿಸು. ನಿನ್ನ ಕಾರ್ಯ ಅನುಕೂಲವಾಗುವುದು" ಎಂದು ಹೇಳಿ ತನ್ನ ಕುದುರೆಯನ್ನು ಶರವೇಗದಲ್ಲಿ ಓಡಿಸಿದ.

ಅದೇ ಪ್ರಕಾರ ವರ್ತಕನು ರೂಪಸಿಂಹನ ಕಾಣಿಕೆಯನ್ನು ಸಿಂಹಳರಾಜನಿಗೆ ಅರ್ಪಿಸಿದ. ಶ್ರೀಗಂಧವನ್ನೇ ಕಂಡರಿಯದ ಆ ರಾಜನು ಠಾಕೂರ್ ರೂಪಸಿಂಹನ ಬಹುಮಾನಕ್ಕೆ ಮಾರುಹೋಗಿ ವರ್ತಕನಿಗೆ ಎಲ್ಲ ಅನುಕೂಲಗಳನ್ನೂ ಒದಗಿಸಿಕೊಟ್ಟುದಲ್ಲದೆ, ರೂಪಸಿಂಹನಿಗೆ ರತ್ನಖಚಿತವಾದ ಪಾದುಕೆಗಳನ್ನು ವರ್ತಕನೊಂದಿಗೆ ತನ್ನ ಸನ್ಮಾನವಾಗಿ ಕೊಟ್ಟು ಕಳುಹಿಸಿದ.

ಆ ವರ್ತಕನು ಹಿಂತಿರುಗಿ ರೂಪಸಿಂಹನಿಗಾಗಿ ಸಾಯಂಕಾಲ ಆ ನಗರದ ಚೌಕದಲ್ಲಿ ಕಾದುನಿಂತಿದ್ದ. ರೂಪಸಿಂಹನು ಎಂದಿನಂತೆ ಅಲ್ಲಿಗೆ ಬಂದ. "ನಮಸ್ಕಾರ ಮಹಾಪ್ರಭೂ" ಎಂದು ವರ್ತಕನು ಕೈ ಜೋಡಿಸಿದ.

"ಯಾರು ನೀನು?" ಎಂದು ರೂಪಸಿಂಹನು ಕುದರೆಯ ಮೇಲಿಂದಲೇ ಕೇಳಿದ.

"ನಾನೊಬ್ಬ ವ್ಯಾಪಾರಿ. ತಾವು ಅಂದು ನನ್ನೊಂದಿಗೆ ಕಳುಹಿಸಿದ ಕಾಣಿಕೆಯನ್ನು ಸಿಂಹಳದ ರಾಜನಿಗೆ ಅರ್ಪಿಸಿದೆ. ಅವರು ಸಂಪ್ರೀತರಾಗಿ ತಮಗೆ ಈ ಪಾದುಕೆಗಳನ್ನು





ಬಹುಮಾನವಾಗಿ ಕಳುಹಿಸಿದ್ದಾರೆ. ಸ್ವೀಕರಿಸ ಬೇಕು" ಎಂದ ವರ್ತಕ.

"ನೀನೀಗ ಯಾವದೇಶಕ್ಕೆ ಹೋಗು ತ್ತಿರುವೆ?" ಎಂದು ವಿಚಾರಿಸಿದ ರೂಪಸಿಂಹ.

"ಅರೇಬಿಯಾ ದೇಶಕ್ಕೆ ಹೊರಟಿರು ವೆನು" ಎಂದನಾ ವರ್ತಕ.

"ಹಾಗಾದರೆ ಅರೇಬಿಯಾ ಚಕ್ರವರ್ತಿಗೆ ಈ ಪಾದುಕೆಗಳನ್ನು ನಮ್ಮ ಕಾಣಿಕೆಯಾಗಿ ಬಹುಮಾನ ಒಪ್ಪಿಸು. ನಿನ್ನ ಕೆಲಸ ಈಡೇರು ವುದು" ಎಂದು ಹೇಳಿ ರೂಪಸಿಂಹನು ಅಲ್ಲಿಂದ ಹೊರಟುಬಿಟ್ಟನು.

ವರ್ತಕನು ಅರೇಬಿಯಾದೇಶಕ್ಕೆ ಹೋದ. ಆ ದೇಶದ ಚಕ್ರವರ್ತಿಗೆ ರೂಪಸಿಂಹನ ಬಹುಮಾನ ವೊಪ್ಪಿಸಿದ. ಆತನು ರತ್ನಕೆತ್ತಿದ ಪಾದುಕೆಗಳನ್ನುನೋಡಿ ಇಂತಹ ಅಮೂಲ್ಯ ವಾದ ಕಾಣಿಕೆಯನ್ನು ಕಳುಹಿಸಿದಾತನು ಸಾಮಾನ್ಯನಾಗಿರಲಾರನೆಂದುಕೊಂಡು ಭಯ ಪಟ್ಟ. ಅರೇಬಿಯಾ ದೇಶದ ಕುದುರೆಗಳು ಉತ್ತಮವೆಂದು ಲೋಕಪ್ರಸಿದ್ಧಿ. ಅವುಗಳಲ್ಲಿ ಉತ್ತಮೋತ್ತಮವಾದ ನೂರು ಅಶ್ವಗಳನ್ನು ತರಿಸಿ ವರ್ತಕನ ವಶಕ್ಕೆ ಕೊಟ್ಟು, "ರೂಪ ಸಿಂಹ ಠಾಕೂರ್‌ರವರಿಗೆ ನಮ್ಮ ಸಲಾಂಹೇಳಿ, ಈ ಅಶ್ವಗಳನ್ನು ನಮ್ಮ ಕಾಣಿಕೆಯೆಂದು ಅವರಿಗೆ ಒಪ್ಪಿಸು" ಎಂದ ಚಕ್ರವರ್ತಿ.

ವರ್ತಕನು ಆ ನೂರು ಅಶ್ವಗಳನ್ನು ಶ್ರದ್ಧೆ ಯಿಂದ ಸಾಗಿಸಿಕೊಂಡು ಬಂದು ಎಂದಿನಂತೆ ಮಾಮೂಲು ಸ್ಥಳದಲ್ಲಿ ಕಾದಿದ್ದ. ಸ್ವಲ್ಪಹೊತ್ತಿಗೆಲ್ಲಾ ರೂಪಸಿಂಹ ಕುದುರೆಯಮೇಲೆ ಅಲ್ಲಿಗೆ ಬಂದು ವರ್ತಕನನ್ನು ನೋಡಿ ನಿಂತುಬಿಟ್ಟ.

ವರ್ತಕನು ನೂರು ಅಶ್ವಗಳನ್ನು ತೋರಿಸಿ "ಮಹಾಪ್ರಭೂ, ಅರೇಬಿಯಾ ಚಕ್ರವರ್ತಿ ಗಳು ನಿಮಗೆ ಇವುಗಳನ್ನು ಕಾಣಿಕೆಯಾಗಿ ಕಳುಹಿಸಿದ್ದಾರೆ, ಒಪ್ಪಿಸಿಕೊಳ್ಳಿ" ಎಂದ.

"ನೀನೀಗ ಯಾವಲ್ಲಿಗೆ ಹೋಗುತ್ತಿರುವೆ?"

"ನಾನು ಮತ್ತೆ ಸಿಂಹಳದೇಶಕ್ಕೆ ಹೋಗುತ್ತೇನೆ," ಎಂದ ವರ್ತಕ.

"ಹಾಗಿದ್ದ ಪಕ್ಷಕ್ಕೆ ಈ ಕುದುರೆಗಳನ್ನು ಸಾಗಿಸಿಕೊಂಡು ಹೋಗಿ ಸಿಂಹಳರಾಜನಿಗೆ ನಮ್ಮ ಕಾಣಿಕೆಯೆಂದು ಒಪ್ಪಿಸು" ಎಂದವನೇ ಅಲ್ಲಿಂದ ಎತ್ತಲೋ ಮಾಯವಾದ ರೂಪ ಸಿಂಹ. ಅದೇಪ್ರಕಾರ ವರ್ತಕನು ನೂರು ಅಶ್ವ

ಗಳನ್ನು ಸಿಂಹಳದ ರಾಜನಿಗೆ ಸಮರ್ಪಿಸಿ, ಅದು ರೂಪಸಿಂಹ ಠಾಕೂರ್‌ರವರು ಕಳು ಹಿಸಿದ ಕಾಣಿಕೆ ಎಂದು ಅರಿಕೆಮಾಡಿದ.

ಆ ಕಾಣಿಕೆಯನ್ನು ಕಂಡೊಡನೆ ಸಿಂಹಳದ ರಾಜನು ಅತ್ಯಾನಂದದಿಂದ ತುಂಬಿಹೋದ. ರೂಪಸಿಂಹನು ಕಳುಹಿಸುವ ಕಾಣಿಕೆಗಳೆಲ್ಲಾ ಅಮೂಲ್ಯವಾದವು. ಅದಕ್ಕಿಂತಲೂ ಅಮೂಲ್ಯ ವಾದುದು ಆತನ ಗೆಳೆತನ.

ರೂಪಸಿಂಹನು ಯುವಕನೂ, ಸುಂದ ರನೂ ಎಂಬ ವಿಷಯ ವರ್ತಕನಿಂದ ಅರಿತು, ತನ್ನ ಒಬ್ಬಳೇ ಮಗಳನ್ನು ಕೊಟ್ಟು ಮದುವೆ ಮಾಡಲು ಯೋಚಿಸಿದ. ರೂಪಸಿಂಹನಿಗಾಗಿ ರಾಜೋಚಿತವಾದ ಬಟ್ಟೆಬರೆ, ಆಭರಣ ಗಳನ್ನು ಕೊಟ್ಟು ಭಾರಿ ಪರಿವಾರವನ್ನು ವರ್ತ ಕನ ಹಿಂದೆ ಕಳುಹಿಸಿದ ಸಿಂಹಳದೇಶದರಾಜ.

ರೂಪಸಿಂಹನ ವಾಸಸ್ಥಳ ತಿಳಿಯದಾದ ಕಾರಣ ವರ್ತಕನು ಸಿಂಹಳರಾಜನು ಕಳು ಹಿಸಿದ ಪರಿವಾರವನ್ನು ನಗರದ ಚೌಕದಲ್ಲಿ ನಿಲ್ಲಿಸಿದ. ಸಂಜೆಯಾಗುತ್ತಲೇ ಯಥಾಪ್ರಕಾರ ರೂಪಸಿಂಹನು ಬಂದ.

ವರ್ತಕನು ರೂಪಸಿಂಹನಿಗೆ ತಾನು ತಂದಿದ್ದ ಸಂದೇಶವನ್ನು ಮುಟ್ಟಿಸಿದ. ರೂಪ ಸಿಂಹನು ತನಗಾಗಿ ಸಿಂಹಳದೇಶದ ಅರಸನು ಕಳುಹಿಸಿದ ವಸ್ತ್ರಾಭರಣಗಳನ್ನು ಸ್ವೀಕರಿಸಿ, ಮಾರನೇಯದಿನ ಅದೇ ಸ್ಥಳದಲ್ಲಿ ಭೇಟಿ ಕೊಡುವುದಾಗಿ ಹೇಳಿ ಹೊರಟುಹೋದ.

ಅನಂತರ ರೂಪಸಿಂಹನು ಬಾಡಿಗೆ ಬಟ್ಟೆ ಬರೆ ಕುದುರೆಗಳನ್ನು ಹಿಂತಿರುಗಿಸಿ, ಸಿಂಹಳ ರಾಜನು ಕಳುಹಿಸಿದ ಅರಿವೆ ಆಭರಣಗಳನ್ನು ಧರಿಸಿ, ಅಂದು ಸೌದೆಮಾರಿ ಬಂದ ಹಣದಿಂದ ಪಲ್ಲಕ್ಕಿಯನ್ನು ಬಾಡಿಗೆಗೆ ಪಡೆದು, ಸಾಯಂಕಾಲದ ಹೊತ್ತಿಗೆ ಚೌಕವನ್ನು ಸೇರಿ ಕೊಂಡ. ಆತನಿಗಾಗಿ ಸಿಂಹಳರಾಜನ ಪರಿ ವಾರ ಮತ್ತು ವರ್ತಕನು ಕಾದಿದ್ದರು. ಎಲ್ಲರೂ ಸೇರಿ ಸಿಂಹಳದೇಶಕ್ಕೆ ಪ್ರಯಾಣ ಮಾಡಿದರು.

ಸಿಂಹಳ ಅರಸಕುವರಿಗೂ ರೂಪಸಿಂಹ ನಿಗೂ ವಿಜೃಂಭಣೆಯಿಂದ ವಿವಾಹ ನೆರ ವೇರಿತು. ಸಿಂಹಳರಾಜನಿಗೆ ಗಂಡು ಸಂತಾನ ವಿಲ್ಲವಾದ ಕಾರಣ, ಕಾಲಕ್ರಮೇಣ ರೂಪ ಸಿಂಹನೇ ಸಿಂಹಳದೇಶಕ್ಕೆ ಅರಸನಾದ.






# ಮಂದಮತಿ

ಒಂದಾನೊಂದು ಊರಿನಲ್ಲಿ ಪಾಲಯ್ಯ ಅಂತ ಒಬ್ಬನಿದ್ದ. ಆತನಿಗೆ ನೆಂಟರಿಷ್ಟರು ಯಾರೂ ಇರಲಿಲ್ಲ. ಮನೆ ಮಠಸಹ ಇರಲಿಲ್ಲ. ಎಂತಲೇ ಆತನು ಬಡ ರೈತನೊಬ್ಬನ ಮಗಳನ್ನು ಮದುವೆ ಯಾಗಿ ಅತ್ತೆಯ ಮನೆಯಲ್ಲೇ ಇದ್ದುಬಿಟ್ಟ.

ಪಾಲಯ್ಯನ ಹೆಂಡತಿ ಲಕುಮವ್ವ ಮಂದ ಮತಿ. ಆಕೆಯ ತಾಯಿ ನರಸಮ್ಮನೂ ಸಹ ಅಷ್ಟೇನೂ ತಿಳುವಳಿಕೆಯುಳ್ಳ ಹೆಂಗುಸಲ್ಲ. ಒಂದುದಿನ ಲಕುಮವ್ವ ತನ್ನ ಕೈಗೂಸಿಗೆ ನೀರೆರೆದು, ಅಂಗಿಹಾಕಿ, ಕಣ್ಣಿಗೆಕಾಡಿಗೆ ಇಟ್ಟು, ತಲೆಗೆ ಹರಳೆಣ್ಣೆ ಹಚ್ಚಿ, ತೊಟ್ಟಿಲಲ್ಲಿ ಮಲಗಿಸಿ ಜೋಗುಳ ಹಾಡುತ್ತಾ ತೂಗುತ್ತಿದ್ದಳು.

ಅಕಸ್ಮಾತ್ತಾಗಿ ಅವಳು ತೊಟ್ಟಿಲು ತೂಗುವುದನ್ನು ನಿಲ್ಲಿಸಿ, "ಅಯ್ಯೋ ನಾನೇನು ಮಾಡಲಿ" ಎಂದು ಅಳಲು ಪ್ರಾರಂಭಿಸಿದಳು. ಈ ಅಳುವಿನ ಶಬ್ದ ಕೇಳಿ ಹಿತ್ತಲಲ್ಲಿ ಕೆಲಸ ಮಾಡುತ್ತಿದ್ದ ನರಸಮ್ಮ ಧಾವಿಸಿಬಂದು ಮಗಳನ್ನು ನೋಡಿ "ಏನೇ, ಏನಾಯಿತೇ ತಾಯಿ, ಬೇಗ ಹೇಳಮ್ಮಾ" ಎಂದು ಕಕ್ಕುಲತೆ ಯಿಂದ ನುಡಿದಳು. ಲಕುಮವ್ವ ಭಯದಿಂದ ನಡುಗುತ್ತಾ ಅಳುತ್ತಳುತ್ತಲೇ ಅಡ್ಡ ಹಲಗೆಯಮೇಲಿದ್ದ ಸಣ್ಣ ಪೆಟ್ಟಿಗೆಯನ್ನು ತೋರಿಸಿ "ಅತ್ತಿತ್ತ ಓಡಾಡುವ ಇಲಿಗಳಿಗಾಗಿ ಬೆಕ್ಕು ಬಂದು ಆ ಪೆಟ್ಟಿಗೆಯನ್ನು ಒದ್ದರೆ, ಅದು ತೊಟ್ಟಿಲಲ್ಲಿರುವ ನನ್ನ ಕಂದನ್ಮನಮೇಲೆ ಬಿದ್ದು ಮಗು ಸತ್ತುಹೋಗುತ್ತದೆ" ಎಂದು ತಾಯಿಯನ್ನು ಅಪ್ಪಿಕೊಂಡು ರೋದಿಸಲು ಮೊದಲು ಮಾಡಿದಳು.

"ಅಯ್ಯೋ ಹೌದೆ. ಮಗುವಿಗೆ ಎಂತಹ ಆಪತ್ತು ಬಂದೊದಗಿತವ್ವಾ" ಎಂದು ನರಸಮ್ಮನೂ ಮಗಳೊಂದಿಗೆ ಗೋಳಾಡ ಹತ್ತಿದಳು. ತಾಯಿಮಗಳು ಈರೀತಿ ಗೋಳಾಡುತ್ತಿರುವ ಸಮಯಕ್ಕೆ ಪಾಲಯ್ಯಮನೆಗೆಬಂದ. ಅವರ ದುಃಖಕ್ಕೆ ಕಾರಣವನ್ನು ತಿಳಿದುಕೊಂಡು ಉರಿದುಬಿದ್ದ.

"ಪ್ರಪಂಚದಲ್ಲಿ ಎಷ್ಟೋಜನ ಬುದ್ಧಿಹೀನರನ್ನು ನೋಡಿರುವೆನಾದರೂ, ನಿಮ್ಮಂತಹ ಮಂದಮತಿಗಳನ್ನು ನಾನೆಲ್ಲಿಯೂ ನೋಡು

ಕೆ. ಪದ್ಮಾವತಿ



ವಂತಿಲ್ಲ. ಈ ದಿನವೇ ನಾನು ದೇಶಾಟನೆಗೆ ಹೊರಡುವೆನು. ಪ್ರಪಂಚದಲ್ಲಿ ನಿಮಗಿಂತಲೂ ಹೆಚ್ಚು ತಿಳಿಗೇಡಿಗಳು ಕಾಣಿಸಿದರೆ ಮಾತ್ರ ಮನೆಗೆ ಹಿಂತಿರುಗುತ್ತೇನೆ. ಇಲ್ಲದಿದ್ದರೆ ಬರುವುದೇ ಇಲ್ಲ" ಎಂದು ಪಾಲಯ್ಯ ದೇಶಾಟನೆಗೆ ಹೊರಟ.

ಪಾಲಯ್ಯ ಕಾಲುನಡಿಗೆಯಿಂದ ಅನೇಕ ಗ್ರಾಮಗಳನ್ನು ದಾಟಿ ಒಂದು ದಿನ ಮುಂಜಾನೆ ಒಂದು ಗ್ರಾಮವನ್ನು ತಲುಪಿದ. ಊರಹೊರಗೆ ಒಬ್ಬ ಗೃಹಸ್ಥ ಕಾಣಿಸಿದ. ಆತನ ಕೈಯಲ್ಲಿ ಒಂದು ಬುಟ್ಟಿಯಿತ್ತು. ಆ ಬುಟ್ಟಿಯನ್ನು ಸೂರ್ಯನೆಡೆಗೆ ತೋರಿಸಿ, ಮನೆಯೊಳಕ್ಕೆ ಹೊಕ್ಕು, ಮತ್ತೆ ಹೊರಕ್ಕೆ ಬಂದು, ಮತ್ತೆ ಬುಟ್ಟಿಯನ್ನು ಸೂರ್ಯನ ಕಡೆ ತೋರಿಸುತ್ತಿದ್ದ. ಈ ಪ್ರಕಾರ ಆವ್ಯಕ್ತಿ ನಾಲ್ಕೈದುಬಾರಿ ಒಳಗೆ ಹೋಗಿಬರುವುದನ್ನು ಕಂಡ ಪಾಲಯ್ಯ "ಅಣ್ಣಾ ನೀವು ಮಾಡುತ್ತಿರುವ ಕೆಲಸವೇನು?" ಎಂದು ಕೇಳಿದ.

"ಮನೆಯಲ್ಲಿ ರಾತ್ರಿ ಹಗಲೂ ಒಂದೇ ರೀತಿ ಕತ್ತಲು. ಮೂರು ದಿನಗಳಿಂದ ಅನೇಕ ಬುಟ್ಟಿಗಳ ಬೆಳಕನ್ನು ಒಳಗೆ ಸುರಿದೆ. ಆದರೂ ಪ್ರಯೋಜನವಾಗಲಿಲ್ಲ" ಎಂದು ಬೇಸರಿಕೆಯಿಂದ ಆತ ನುಡಿದ.

ಆತನ ತಿಳಿಗೇಡಿತನಕ್ಕೆ ಪಾಲಯ್ಯ ನಸುನಕ್ಕು "ಅಣ್ಣಾ, ನಿಮ್ಮ ಮನೆಯಲ್ಲಿ ಒಂದು ಗಡಾರಿ ಇದ್ದರೆ ತೆಗೆದುಕೊಂಡು ಬನ್ನಿ" ಎಂದ. ಆತನು ಕೂಡಲೇ ಒಂದು ಗಡಾರಿ ತಂದುಕೊಟ್ಟ. ಪಾಲಯ್ಯ ಗಡಾರಿಯಿಂದ ಆ ಮನೆಯ ಗೋಡೆಯಲ್ಲಿ ಒಂದು ಸಣ್ಣ ಕಂಡಿ ಅಗೆದು "ಅಣ್ಣಾ ನೋಡಿದೆಯಾ ಬೆಳಕು ನಿನ್ನ ಮನೆಯೊಳಕ್ಕೆ ಹೇಗೆ ಪ್ರವೇಶಿಸುತ್ತಿರುವುದೊ!" ಎಂದ. ಮನೆಯ ಯಜಮಾನನು ಸಂತೋಷಪಟ್ಟು ಪಾಲಯ್ಯನ ಬುದ್ಧಿವಂತಿಕೆಯನ್ನು ಮೆಚ್ಚಿಕೊಂಡ.

ಪಾಲಯ್ಯ ಅಲ್ಲಿಂದ ಮತ್ತೊಂದು ಪಟ್ಟಣವನ್ನು ಸೇರಿಕೊಂಡ. ಆ ಪಟ್ಟಣದಲ್ಲಿ ಕಮ್ಮಾರನೊಬ್ಬನು ತನ್ನ ಮನೆಯ ಬಾಗಿಲನ್ನು ಕಿತ್ತುಹಾಕಲು ಕೂಲಿಯಾಳುಗಳನ್ನು ತಂದು ಕೆಲಸ ಪ್ರಾರಂಭಿಸಲಿದ್ದನು.

ಪಾಲಯ್ಯ "ಏನು ಅಣ್ಣಾವರೇ, ಬಾಗಿಲು ಗಟ್ಟಿಯಾಗಿರುವುದಲ್ಲಾ, ಎಕೆ ತೆಗೆಯುತ್ತಿರು



ವಿರಿ?" ಎಂದು ಕಮ್ಮಾರನನ್ನು ಕೇಳಿದ. "ಏನು ಮಾಡಲಪ್ಪಾ, ಅಚ್ಚು, ಚಕ್ರಗಳು, ಅಡ್ಡಪಟ್ಟಿಗಳೊಂದಿಗೆ ಗಾಡಿ ತಯಾರಿಸಿರುವೆನು. ಗಾಡಿಯನ್ನು ಒಳಗಿನಿಂದ ಹೊರಗೆ ತರಲು ಬಾಗಿಲು ಹಿಡಿಯುವಂತಿಲ್ಲ. ಅದರಿಂದ ಬಾಗಿಲನ್ನು ತೆಗೆಯಿಸುತ್ತಿರುವೆನು" ಎಂದ ಕಮ್ಮಾರ. "ಹುಚ್ಚನೇ, ಈ ಭಾಗ್ಯಕ್ಕೆ ಬಾಗಿಲನ್ನು ಈ ರೀತಿ ತೆಗೆಯಿಸುವುದುಂಟೆ? ನಿನ್ನ ಗಾಡಿಯ ಭಾಗಗಳನ್ನು ಬೇರೆಬೇರೆಯಾಗಿ ಬಿಡಿಸಿ, ಹೊರಗೆ ತಂದು ಮತ್ತೆ ಗಾಡಿಯನ್ನು ಜೋಡಿಸು" ಎಂದ.

ಪಾಲಯ್ಯನ ಜಾಣತನಕ್ಕೆ ಕಮ್ಮಾರನು ಬೆರಗಾದ. ದಾರಂದ ಕೆಡವಲು ಕರೆಯಿಸಿದ ಕೂಲಿಯಾಳುಗಳನ್ನು ಕಳುಹಿಸಿ, ಪಾಲಯ್ಯನ ಸಲಹೆಯಂತೆ ಮಾಡಿದ.

ಇನ್ನೊಂದಿಷ್ಟುದೂರ ಪ್ರಯಾಣ ಮಾಡಲು ಪಾಲಯ್ಯನಿಗೆ ಅತಿವಿಚಿತ್ರವಾದ ಒಂದು ದೃಶ್ಯ ಕಾಣಿಸಿತು. ಅದನ್ನು ಕಂಡು ಪಾಲಯ್ಯನಿಗೆ ನಗುಬಂತು. ಒಂದು ದನದ ದೊಡ್ಡಿಯಲ್ಲಿ ಒಬ್ಬಾತ ಅಟ್ಟದಮೇಲೆ ಕುಳಿತುಕೊಂಡಿದ್ದಾನೆ. ಕೆಳಗೆ ಒಂದು ಹಸು ನಿಂತಿದೆ. ಹಸುವಿನ ಕೊರಳಿಗೆ ಕಟ್ಟಿರುವ ಹಗ್ಗ ಅಟ್ಟದಮೇಲೆ ಕುಳಿತಿರುವಾತನ ಕೈಯಲ್ಲಿದೆ. ಅವನು ಆ ಹಗ್ಗವನ್ನು ಬಲವಾಗಿ ಎಳೆಯುತ್ತಾ "ಮೇಲಕ್ಕೆ ಬಾ, ಎಷ್ಟುದಿನಾ ಅಂತ ತಿಂಡಿಯಿಲ್ಲದೆ ಸಾಯುವೆ? ನಾಲ್ಕುದಿನಗಳಿಂದ ಹಸಿದಿದ್ದರೂ ಇನ್ನೂ ಬುದ್ಧಿಬಂದಿಲ್ಲವಲ್ಲಾ"





ಎಂದು ಹಸುವಿಗೆ ಹೇಳುತ್ತಿದ್ದನು. ಪಾಲಯ್ಯ ಉಕ್ಕಿಬರುತ್ತಿದ್ದ ನಗುವನ್ನು ತಡೆದುಕೊಂಡು "ಎಲೋ, ಏಕೆ ಹಸುವಿಗೆ ಆ ರೀತಿ ಹಿಂಸೆ ಕೊಡುವೆ?" ಎಂದು ಕೇಳಿದ.

"ನೋಡಿಸ್ವಾಮಿ, ನಾಲ್ಕು ದಿನಗಳ ಹಿಂದೆ ಈ ಹಸುವನ್ನು ಕೊಂಡುಕೊಂಡೆ. ಅದರ ಸಲುವಾಗಿ ಹುಲ್ಲು ಕೊಂಡುಕೊಂಡು ಭದ್ರವಾಗಿ ಅಟ್ಟದಮೇಲೆ ಹಾಕಿದ್ದೇನೆ. ಮೇಲಕ್ಕೆ ಬಂದು ಹುಲ್ಲುತಿನ್ನುವಂತೆ ಹೇಳಿದರೆ ಬಿಲ್ಗುಲ್ಲೂ ಬರುತ್ತಿಲ್ಲ. ಹಾಗಾದರೆ ಹಸು ಬದುಕುವುದೆಂತು? ನೀವೇ ಹೇಳಿ. ನನ್ನ ಬುದ್ಧಿಗೇನೂ ಹೊಳೆಯುತ್ತಿಲ್ಲ" ಎಂದ.

"ಹಸುವೆಲ್ಲಿಯಾದರೂ ಅಟ್ಟದ ಮೇಲಕ್ಕೆ ಬರುವುದುಂಟೆ? ನೀನೇ ಅಟ್ಟದಮೇಲಿಂದ ಹುಲ್ಲು ತಂದುಹಾಕಬೇಕು" ಎಂದ ಪಾಲಯ್ಯ. ಅವನು ಕೂಡಲೇ ಸ್ವಲ್ಪ ಹುಲ್ಲನ್ನು ತೆಗೆದುಕೊಂಡು ಅಟ್ಟದಮೇಲಿಂದ ಇಳಿದು ಹಸುವಿನ ಮುಂದೆ ಹಾಕಿದ. ಕೂಡಲೇ ಹಸು ಅದನ್ನು ತಿನ್ನಲಾರಂಭಿಸಿತು. ಆಗ ಹಸುವಿನ ಯಜಮಾನ ಪಾಲಯ್ಯನ ಕಾಲಿಗೆ ಬಿದ್ದು, "ಸ್ವಾಮಿ, ನನ್ನ ಹಸುವನ್ನೂ ನನ್ನನ್ನೂ ಕಾಪಾಡಿದಿರಿ; ನಿಮ್ಮ ಉಪಕಾರವನ್ನು ನಾನು ಎಂದಿಗೂ ಮರೆಯಲಾರೆ" ಎಂದ.

ಪಾಲಯ್ಯ ಆಗ ಹೀಗೆಂದು ಯೋಚಿಸಿದ: "ಪ್ರಪಂಚದಲ್ಲಿ ಇಂತಹ ಮೂಢರಿರುವರೆಂದು ನಾನು ತಿಳಿದಿರಲಿಲ್ಲ. ಬುಟ್ಟಿಯಿಂದ ಬೆಳಕನ್ನು ಮನೆಯೊಳಕ್ಕೆ ತಂದು ಸುರಿಯುವವನೊಬ್ಬ, ಗಾಡಿಯನ್ನು ಹೊರಕ್ಕೆ ತರುವ ಸಲುವಾಗಿ ಮನೆಯ ಹಿಂದಿನ ಬಾಗಿಲನ್ನೇ ಕಿತ್ತುಹಾಕುವವನು, ಮೇವುತಿನ್ನಿಸಲು ಹಸುವನ್ನೇ ಅಟ್ಟದ ಮೇಲೇರಿಸಬೇಕೆನ್ನುವ ಪ್ರಭೃತಿಗಳಿದ್ದಾರೆ. ನಿಧಾನವಾಗಿ ಯೋಚಿಸಿ ನೋಡಿದರೆ ಇವರೆಲ್ಲರಿಗಿಂತಲೂ ನನ್ನ ಹೆಂಡತಿ ತಿಳಿಗೇಡಿಯಲ್ಲ. ಬೆಕ್ಕುಗಳು ಅಡ್ಡ ಹಲಗೆಯಮೇಲೆ ಓಡಾಡುವಾಗ ಅಲ್ಲಿರುವ ವಸ್ತುಗಳನ್ನು ಬೀಳಿಸುವುದುಂಟು. ಅಷ್ಟೆತ್ತರದಿಂದ ಪೆಟ್ಟಿಗೆ ಬಿದ್ದರೆ ಹಸುಗೂಸಿಗೆ ನಿಜವಾಗಿ ಪ್ರಮಾದ ಸಂಭವಿಸುವುದು" ಹೀಗೆಂದುಕೊಂಡು ಪಾಲಯ್ಯ ಮನೆಗೆ ಹಿಂತಿರುಗಿ ಹೋಗಿ ಹೆಂಡತಿ ಮತ್ತು ಮಗುವಿನೊಂದಿಗೆ ಸುಖವಾಗಿದ್ದ.





# ಸೂಜಿಯಿಂದ ಸೌಭಾಗ್ಯ

ಬಹಳ ದಿನಗಳಹಿಂದೆ ಒಂದು ದೇಶದಲ್ಲಿ ಮೂವರು ಸ್ನೇಹಿತರಿದ್ದರು. ಅವರಲ್ಲಿ ನಂದ ಮತ್ತು ಸುನಂದರು ಧನಿಕರು. ಮೂರನೇ ಯುವನಾದ ಆನಂದ ಹುಟ್ಟು ದರಿದ್ರ. ಆತನು ಹಗ್ಗ ಹೊಸೆದು ಜೀವಿಸುತ್ತಿದ್ದನು. ಆನಂದನನ್ನೂ ಸಹ ಹೇಗಾದರೊಂದು ರೀತಿಯಲ್ಲಿ ಧನಿಕನನ್ನಾಗಿ ಮಾಡಬೇಕೆಂದು ನಂದ ಮತ್ತು ಸುನಂದರು ಯೋಚಿಸಿದರು. "ಸ್ವಲ್ಪ ಬಂಡವಾಳವಿದ್ದರೆ ಯಾರಾದರೂ ಹಣವಂತರಾಗಬಹುದು. ಆದುದರಿಂದ ನಾವು ಸ್ವಲ್ಪ ಮೂಲಧನವನ್ನು ಕೊಡೋಣ" ಎಂದ ನಂದ. "ಅದೇನೂ ಬೇಡ. ಯೋಗ ಕೂಡಿ ಬಂದರೆ ಹೆಚ್ಚು ಬಂಡವಾಳವಿಲ್ಲದೆಯೇ ಧನಿಕನಾಗಬಹುದು" ಎಂದ ಸುನಂದ.

ತನ್ನ ಅಭಿಪ್ರಾಯವೇ ಉತ್ತಮವೆಂದು ತೋರಿಸಿಕೊಡಲು ನಂದನು ತನ್ನ ಮಿತ್ರ ಆನಂದನಿಗೆ ಇನ್ನೂರು ರೂಪಾಯಿಗಳನ್ನು ಕೊಟ್ಟ. ಆನಂದ ಸಂತಸಗೊಂಡು, ಆ ಇನ್ನೂರು ರೂಪಾಯಿಗಳಲ್ಲಿ ಹತ್ತು ರೂಪಾಯಿಗಳನ್ನು ತನ್ನ ಸ್ವಂತ ಖರ್ಚಿಗೆ ತೆಗೆದುಕೊಂಡು ಉಳಿದುದನ್ನು ತನ್ನ ರುಮಾಲಿನಲ್ಲಿ ಭದ್ರವಾಗಿ ಗಂಟುಹಾಕಿ, ಮನೆಗೆ ಬೇಕಾದ ಪದಾರ್ಥಗಳನ್ನು ತರಲು ಅಂಗಡಿಗೆ ಹೋದನು. ದುರದೃಷ್ಟವಶಾತ್ ದಾರಿಯಲ್ಲಿ ಒಂದು ಪಕ್ಷಿ ಆನಂದನ ತಲೆಯಮೇಲಿದ್ದ ರುಮಾಲನ್ನು ನೋಡಿತು. ಆ ಮೂಟೆಯನ್ನು ಕಂಡು ತಿನ್ನಲು ಏನೋ ಇರುವುದೆಂದು ಭಾವಿಸಿ ರುಮಾಲನ್ನೆ ಹಾರಿಸಿಕೊಂಡು ಹೋಯಿತು ಆ ಪಕ್ಷಿ. ಒಮ್ಮೆಗೇ ನೂರ ತೊಂಬತ್ತು ರೂಪಾಯಿ ಕಳೆದುಹೋಗಲು ಆನಂದನು ತುಂಬಾ ವ್ಯಾಕುಲಗೊಂಡನು.

ತರುವಾಯ ಕೆಲವು ದಿನಗಳಾದನಂತರ ನಂದ ಮತ್ತು ಸುನಂದರು ಆನಂದನ ಮನೆಗೆ ಬಂದರು. ಅವನ ಪರಿಸ್ಥಿತಿ ಯಥಾಪ್ರಕಾರವೇ ಇತ್ತು. ಇದಕ್ಕೆ ಕಾರಣವೇನೆಂದು ಕೇಳಿದರು.

"ನನ್ನ ಅದೃಷ್ಟಖೊಟ್ಟಿ. ನಂದನಿತ್ತ ಹಣ ರೂಮಾಲಿನಲ್ಲಿ ಸುತ್ತಿ ಗಂಟುಹಾಕಿದ್ದೆ. ಯಾವುದೋ ಪಕ್ಷಿ ಬಂದು ರುಮಾಲನ್ನು

ವಾಮನ ಮರಕಾಲ




ಹಾರಿಸಿಕೊಂಡು ಹೋಯಿತು" ಎಂದು ಅತೀವ ವೇದನೆಯಿಂದ ನುಡಿದ ಆನಂದ.

ಈ ವೃತ್ತಾಂತವನ್ನು ನಂದನು ನಂಬಿದನಾದರೂ ಸುನಂದ ನಂಬಲಿಲ್ಲ. ಆನಂದ ಆ ಹಣವನ್ನು ದುರ್ವಿನಿಯೋಗ ಮಾಡಿರಬಹುದೆಂದು ಆತನಿಗೆ ಅನುಮಾನ. ಆದರೆ ನಂದನು ಮಾತ್ರ ಮತ್ತೆ ಇನ್ನೂರು ರೂಪಾಯಿಗಳನ್ನು ಕೊಡುತ್ತಾ "ಈಸಾರಿಯಾದರೂ ಹಣವನ್ನು ಜೋಪಾನವಾಗಿಟ್ಟುಕೊಂಡು ಅದರ ಸಹಾಯದಿಂದ ಧನವನ್ನು ಸಂಪಾದಿಸು" ಎಂದ.

ಈ ಸಾರಿಯೂ ಆನಂದನು ತನಗೆ ಆವಶ್ಯಕವಾದಷ್ಟು ಹಣವನ್ನು ಮಾತ್ರ ತೆಗೆದುಕೊಂಡು, ಉಳಿದುದನ್ನು ತೌಡಿನ ಬುಟ್ಟಿಯಲ್ಲಿ ಭದ್ರವಾಗಿ ಬಚ್ಚಿಟ್ಟು, ಮನೆಗೆಬೇಕಾದ ದಿನಸುಗಳನ್ನು ತರಲು ಪೇಟೆಗೆಹೋದ. ಆತನು ಹಿಂತಿರುಗುವ ವೇಳೆಗೆ ತೌಡಿನ ಬುಟ್ಟಿ ಅಲ್ಲಿ ಕಾಣಿಸಲಿಲ್ಲ. ಹೆಂಡತಿಯನ್ನು ಕೇಳಿದ.

"ಉಪ್ಪು ಕೊಳ್ಳಲು ಹಣ ವಿರಲಿಲ್ಲ. ಅದರಿಂದ ತೌಡಿನ ಬುಟ್ಟಿಮಾರಿ, ಎರಡು ಸೇರು ಉಪ್ಪು ಕೊಂಡು ಕೊಂಡೆ" ಎಂದಳು ಆನಂದನ ಮಡದಿ. ಆನಂದನಿಗೆ ಅಪಾರ ವ್ಯಥೆಯುಂಟಾಯಿತು. ತನಗೆ ಹಣ ಸಂಪಾದಿಸುವ ಯೋಗವಿಲ್ಲವೆಂದು ಅರಿತುಕೊಂಡ.

ಕೆಲವು ದಿನಗಳು ಬಿಟ್ಟುಕೊಂಡು ಮತ್ತೆ ನಂದ ಸುನಂದರು ಆನಂದನ ಮನೆಗೆ ಬಂದರು. ಅವರಿಗೆ ನಡೆದವಿಷಯವನ್ನು ಆನಂದನು ಹೇಳಿದ. ಆನಂದನು ಮೊದಲಿಗಿಂತಲೂಹೆಚ್ಚು ದರಿದ್ರನಾಗಿ ಕಾಣಿಸುತ್ತಿದ್ದ. ಆತನು ಹಾಕಿಕೊಂಡಿದ್ದ ಬಟ್ಟೆಗಳೆಲ್ಲಾ ಹರಿದು ಚಿಂದಿಚಿಂದಿಯಾಗಿದ್ದವು. ಅವುಗಳನ್ನು ಅಲ್ಪಸ್ವಲ್ಪ ಹೊಲಿದು ಕೊಳ್ಳಲು ಒಂದು ಸೂಜಿಗೂ ಗತಿಯಿಲ್ಲದಂತಹ ಪರಿಸ್ಥಿತಿ ಒದಗಿತ್ತು ಆತನಿಗೆ.

ಆಗ ತಾನೇ ಅಂಗಡಿಯಿಂದ ಸೂಜಿಯ ಪೊಟ್ಟಣವನ್ನು ಕೊಂಡುಕೊಂಡು ಬಂದಿದ್ದ ಸುನಂದನು, ಆನಂದನ ಕೈಗೆ ಒಂದು ಸೂಜಿಯನ್ನು ಕೊಟ್ಟು, ನಿನ್ನ ಬಟ್ಟೆಗಳನ್ನು ಹೊಲಿಸಿಕೊ" ಎಂದ. ಸ್ವಲ್ಪ ಹೊತ್ತಿನ ನಂತರ ನಂದ ಸುನಂದರು ಹೊರಟುಹೋದರು.

ಅಂದು ರಾತ್ರಿ ಪಕ್ಕದ ಮನೆಯ ಬೆಸ್ತರವನ ಹೆಂಡತಿ ಆನಂದನ ಹೆಂಡತಿಯ ಬಳಿಗೆ ಬಂದು "ಅಕ್ಕಾ, ನಿಮ್ಮ ಹತ್ತಿರ ಒಂದು

ಸೂಜಿಯಿದ್ದರೆ ಕೊಟ್ಟರಿ. ನಾಳೆ ಬೆಳಗ್ಗೆ ನಮ್ಮ ಯಜಮಾನರು ಬಲೆ ತೆಗೆದುಕೊಂಡು ನದಿಯಕಡೆ ಹೋಗುತ್ತಾರೆ. ಬಲೆ ತುಸ ಸರಿ ಮಾಡಬೇಕು. ಬಲೆಯಲ್ಲಿ ಮೊದಲುಬಿದ್ದ ಮೀನುಗಳು ನಿಮಗೆ ಮೀಸಲಾಗಿಡುವೆವು" ಎಂದಳು. ಆನಂದನ ಹೆಂಡತಿ ಆಕೆಗೆ ಸೂಜಿ ಯನ್ನು ಎರವಲು ಕೊಟ್ಟಳು.

ಮಾರನೇಯದಿನ ಸಾಯಂಕಾಲ ಬೆಸ್ತ ರವನು ತನ್ನ ಮಗಳ ಕೂಡೆ ಒಂದು ಭಾರಿ ಮೀನನ್ನು ಆನಂದನಮನೆಗೆಕಳುಹಿಸಿದ. ಅಡಿಗೆ ಮಾಡಲು ಆ ಮೀನನ್ನು ಕೊಯ್ಯುತ್ತಿರುವಾಗ ಅದರಲ್ಲಿ ದೊಡ್ಡದೊಂದು ಗಾಜಿನಮುದ್ದೆ ಸಿಕ್ಕಿತು. ಆನಂದನ ಮಕ್ಕಳು ಅದನ್ನು ಎತ್ತಿ ಕೊಂಡು ಬೀದಿಯಲ್ಲಿ ಆಡುತ್ತಿದ್ದರು. ಅದನ್ನು ನೋಡಿದ ಒಬ್ಬ ರತ್ನಪಡಿ ವ್ಯಾಪಾರಿ ಆನಂದನ ಹತ್ತಿರಕ್ಕೆ ಬಂದು "ಅಯ್ಯಾ, ಆ ಗಾಜಿನ ಮುದ್ದೆ ನನಗೆ ಮಾರುವೆಯಾದರೆ ನೂರು ರೂಪಾಯಿಗಳನ್ನು ಕೊಡುತ್ತೇನೆ" ಎಂದ.

ಆ ಗಾಜಿನಮುದ್ದೆ ಬಹಳ ಬೆಲೆಬಾಳ ಬಹುದೆಂಬ ಅನುಮಾನವುಂಟಾಗಿ ಆನಂದನು ಅದನ್ನು ಮಾರಲು ನಿರಾಕರಿಸಿದನು. ಅಂದೇ ಆ ಗಾಜಿನ ಮುದ್ದೆಯನ್ನು ನಗರಕ್ಕೆ ತೆಗೆದು ಕೊಂಡು ಹೋಗಿ ಒಬ್ಬ ವಜ್ರದ ವ್ಯಾಪಾರಿಗೆ ತೋರಿಸಿದನು. ಅದೊಂದು ಅಮೂಲ್ಯವಾದ ವಜ್ರವಾಗಿತ್ತು. ಆ ವ್ಯಾಪಾರಿ ಅದನ್ನು ಇಪ್ಪತ್ತು ಸಾವಿರ ರೂಪಾಯಿಗಳಿಗೆ ಕೊಂಡುಕೊಂಡ. ಆ ಹಣದಿಂದ ಆನಂದನು ಮನೆಮಠಗಳನ್ನು ಕೊಂಡುಕೊಂಡ. ಹಗ್ಗಹೊಸೆಯಲು ಯಂತ್ರ



ಗಳನ್ನು ತಯಾರು ಮಾಡಿಸಿದ. ಹಗ್ಗದ ಕಾರ್ಖಾನೆಯನ್ನು ಸ್ಥಾಪಿಸಿ ಯಥೇಚ್ಛವಾಗಿ ಹಣ ಗಳಿಸಿ, ಭಾರಿ ಶ್ರೀಮಂತನಾದ.

ಒಂದುದಿನ ನಂದ ಸುನಂದರು ಆತನನ್ನು ನೋಡಲು ಬಂದರು. "ನಾನು ಕೊಟ್ಟ ಬಂಡವಾಳದಿಂದ ಧನಿಕನಾದೆ ತಾನೇ?" ಎಂದು ಕೇಳಿದ ನಂದ. ಆನಂದನು ನಡೆದ ವಿಷಯವನ್ನೆಲ್ಲಾ ವಿವರಿಸಿ ಹೇಳಿದ. "ಕೂಡಿಬಂದಿತಾದ್ದರಿಂದ ಆನಂದನು ನಾನು ಕೊಟ್ಟ ಸೂಜಿಯ ನೆರವಿನಿಂದಲೇ ಹಣವಂತನಾದ. ನಾನು ಆಗಲೇ ಹೇಳಿರಲಿಲ್ಲವೇ, ಯಾವುದಕ್ಕೂ ಕೂಡಿಬರಬೇಕು ಅಂತ" ಎಂದ ಸುನಂದ.

ಈಸಾರಿ ನಂದನಿಗೆ ನಂಬಿಕೆಯುಂಟಾಗಲಿಲ್ಲ. ಆನಂದನು ತಾನು ಕೊಟ್ಟ ಹಣದಿಂದಲೇ ಧನಿಕನಾದನೆಂತಲೂ ಆ ವಿಷಯವನ್ನು ಮರೆಮಾಚಲು ಸುಳ್ಳಾಡುತ್ತಿರುವನೆಂತಲೂ ಭಾವಿಸಿದ. ಮೂವರು ಮಿತ್ರರೂ ಆನಂದನು ಹೊಸದಾಗಿ ಕಟ್ಟಿಸಿದ ಮನೆ, ಹಿಂಭಾಗದಲ್ಲಿರುವ ಅಂಗಳ ನೋಡಲು ಹೋದರು. ಅವರು ಅಂಗಳಕ್ಕೆ ಹೋಗುವ ವೇಳೆಗೆ ಸರಿಯಾಗಿ ಆನಂದನ ಮಕ್ಕಳು ಒಂದು ಮರದಮೇಲಿದ್ದ ಪಕ್ಷಿಯ ಗೂಡನ್ನು ಕೆಳಗೆ ಕೆಡವಿದರು. ಅದರಲ್ಲಿ ಆನಂದನ ಕಳೆದುಹೋಗಿದ್ದ ರುಮಾಲು ಕಾಣಿಸಿತು. ಅದನ್ನು ತೆಗೆದುಕೊಂಡು ಅದರಲ್ಲಿದ್ದ ಗಂಟನ್ನು ಬಿಚ್ಚಲು ನೂರ ತೊಂಬತ್ತು ರೂಪಾಯಿಗಳು ಸಿಕ್ಕಿದವು.

ಅವರು ಅಲ್ಲಿಂದ ದನಗಳ ತೊಟ್ಟಿಯಕಡೆಗೆ ನಡೆದರು. ಅದೇ ಸಮಯದಲ್ಲಿ ನೌಕರನು ಅಂಗಡಿಯಿಂದ ಒಂದು ತೌಡು ಬುಟ್ಟಿ ತೆಗೆದುಕೊಂಡು ಬಂದನು. ಅವನು ಅದರಿಂದ ತೌಡನ್ನು ಕಲಗಚ್ಚಿಗೆ ಹಾಕುತ್ತಿರುವಾಗ ಕೆಲವು ರೂಪಾಯಿಗಳನ್ನು ಹೊರಗೆ ತೆಗೆದನು. ಆ ಬುಟ್ಟಿಯನ್ನು ಬೋರಲು ಹಾಕಲು, ಆನಂದನು ಕಳೆದುಕೊಂಡಿದ್ದ ನೂರತೊಂಬತ್ತು ರೂಪಾಯಿಗಳೂ ದೊರಕಿದವು. ಇದೆಲ್ಲವನ್ನೂ ನೋಡಿ ನಂದನಿಗೆ ಆನಂದನು ಸತ್ಯವನ್ನೇ ನುಡಿದನೆಂದು ಮನವರಿಕೆಯಾಯಿತು. ಸುನಂದನು ಹೇಳಿದಂತೆ ಯೋಗ ಕೂಡಿಬಂದರೆ ಸರಿಬರಲು ಒಂದು ಸೂಜಿಯಾದರೂ ಸಾಕು ಎಂಬುದು ತಿಳಿಯಿತು.






## 11

[ ಸಮರಸೇನಾದಿಗಳು ಬೆಟ್ಟದ ಕೊನೆಯಲ್ಲಿರಲು, ಒಂದು ಕಡೆಯಿಂದ ಏಕಾಕ್ಷಿ ಬಂದು, ಆಗಲೇ ಬೆಟ್ಟವನ್ನು ಹತ್ತುತ್ತಿದ್ದ ಕುಂಭಾಂಡನನ್ನು ಅಟಕಾಯಿಸಿದನಷ್ಟೇ. ಆಗ ಸಮರಸೇನನು ಕುಂಭಾಂಡನನ್ನು ಎದುರಿಸಿದನು. ಅವನ ಸಂಗಡ ಇದ್ದ ಕಾಡುಜನರನೇಕರು ಮರಣಿಸಿದರು. ರಕ್ತದ ವಾಸನೆಗೆ ತೋಳಗಳಗುಂಪು ಬಂತು. ಎಲ್ಲರೂ ಓಡಿದರು. ತರುವಾಯ— ]

ಸಮರಸೇನನೂ, ಸೈನಿಕರೂ ಕೊಂಚದೂರ ಓಡಿ ಒಂದೆಡೆಯಲ್ಲಿ ನಿಂತುಬಿಟ್ಟರು. ಅವರಿದ್ದಲ್ಲಿಗೆ ಕುಂಭಾಂಡನ ಅನುಚರರಾದ ಕಾಡುಜನರ ಕೂಗಾಟ ಕೇಳಿಬರುತ್ತಿತ್ತು. ಅವರು ತಮ್ಮ ಮಾತನ್ನು ಮರೆತು ಪ್ರಾಣರಕ್ಷಣೆಗಾಗಿ ಅಡವಿಯಕಡೆ ಓಡುತ್ತಿರುವರೆಂದು ಸಮರಸೇನನು ತಿಳಿದುಕೊಂಡ. ಚತುರ್ನೇತ್ರ ಮತ್ತು ಏಕಾಕ್ಷಿಯರು ಆ ಸುತ್ತಮುತ್ತಿನಲ್ಲಿರುವಂತೆ ತೋರಲಿಲ್ಲ. ತೋಳಗಳು ಮಾತ್ರ ಇನ್ನೂ ಕಿರುಚುತ್ತಲೇ ಇದ್ದುವು. ಅವು ಗಾಯಗೊಂಡ ಕಾಡುಜನರನ್ನು ಭಕ್ಷಿಸುತ್ತಿರುವುವು.

ಆಯಾಸದಿಂದ ದಣಿದಿದ್ದ ಸೈನಿಕರೂ, ಸಮರಸೇನನೂ ಒಂದು ಮರದ ಕೆಳಗೆ ಕುಳಿತುಕೊಂಡರು. ಕುಂಭಾಂಡನೂ ಸಹ ಧನ ತುಂಬಿರುವ ನಾವೆಯನ್ನು ವಶಪಡಿಸಿಕೊಳ್ಳುವ ಪ್ರಯತ್ನವನ್ನು ಪ್ರಾರಂಭಿಸಿದನೆಂದು ಸಮರಸೇನನಿಗೆ ಅರ್ಥವಾಯಿತು. ಇನ್ನು ಈಗ ಅದಕ್ಕಾಗಿ ಹೆಣಗಾಡುತ್ತಿರುವವರು ಒಬ್ಬರಲ್ಲ. ಇಬ್ಬರಲ್ಲ—ನಾಲ್ವರು—ತಾನು, ಕುಂಭಾಂಡ, ಚತುರ್ನೇತ್ರ ಮತ್ತು ಏಕಾಕ್ಷಿ! ಈ ಪ್ರಯತ್ನದಲ್ಲಿ ಯಾರಿಗೆ ವಿಜಯ ಲಭಿಸುವುದು? ಅದೊಂದು ದೊಡ್ಡ ಪ್ರಶ್ನೆ.





ಗಂಭೀರವಾಗಿ. "ಈ ದ್ವೀಪವನ್ನು ಬಿಟ್ಟು ಹೋಗುವುದು ಸುರಕ್ಷಿತವೆಂದು ಎಂದೋ ನಿರ್ಣಯಿಸಿರುವೆವು. ಅದೇ ಮಾತನ್ನು ಪದೇಪದೇ ಹೇಳುವುದರಿಂದ ಕಾರ್ಯ ಸಾಧಿಸಿದಂತೆ ಆಗುವುದಿಲ್ಲ. ಈ ದ್ವೀಪವನ್ನು ಬಿಟ್ಟು ಹೋಗಲು ಮಾರ್ಗ ಯಾವುದೆಂದು ಎಲ್ಲರೂ ಯೋಚಿಸಬೇಕು" ಎಂದು ನುಡಿದನು.

ಬಿಟ್ಟುಹೋಗಬೇಕೆಂಬ ಆತುರ ಹೊಂದಿದ್ದರೇ ಹೊರತು ಮಾರ್ಗ ಸೂಚಿಸುವಷ್ಟು ಸೂಕ್ಷ್ಮಬುದ್ಧಿಯಿರಲಿಲ್ಲ ಆತನ ಸೈನಿಕರಿಗೆ. ತೀರದಲ್ಲಿ ಬಿಟ್ಟು ಬಂದ ಹಡಗುಗಳು ಯಾವ ಸ್ಥಿತಿಯಲ್ಲಿವೆಯೋ ಅವರು ಅರಿಯರು. ಏಕಾಕ್ಷಿ ಮತ್ತು ಕುಂಭಾಂಡರಿಂದ ಪ್ರಮಾದ ಒದಗದಂತೆ ಜಾಗರೂಕರಾಗಿರಬೇಕು. ಅವರ ಕಣ್ಣಿಗೆ ಬೀಳದೆ ಉಪಾಯವಾಗಿ ತಪ್ಪಿಸಿಕೊಂಡು ಹೋಗಬೇಕು. ಇದು ಸುಲಭವಲ್ಲವೆಂದು ಅವರೆಲ್ಲರೂ ತಿಳಿದಿದ್ದರು.

"ನಾವು ಇಲ್ಲಿಂದ ತಪ್ಪಿಸಿಕೊಂಡು ಹೋಗಲು ಚತುರ್ನೇತ್ರನು ಸಹಾಯ ಮಾಡಲಾರನೇ?" ಎಂದು ಒಬ್ಬ ಸೈನಿಕನು ಕೇಳಿದ. ಈ ಪ್ರಶ್ನೆಗೆ ಏನು ಉತ್ತರ ಹೇಳಬೇಕೋ ಸಮರಸೇನನಿಗೆ ತಕ್ಷಣ ಹೊಳೆಯಲಿಲ್ಲ. ತಮ್ಮನ್ನು ಈ ಭಯಂಕರ ದ್ವೀಪದಿಂದ ಕುಂಡಲಿನೀದ್ವೀಪಕ್ಕೆ ಸೇರಿಸುವಂತೆ ಆತನನ್ನೆಂದೂ ಕೇಳಿರಲಿಲ್ಲ. ಇದು ಚತುರ್ನೇತ್ರನಿಗಾದರೂ ಸಾಧ್ಯವೇ ಎಂಬ ಅನುಮಾನವುಂಟಾಯಿತು. ಅವರೆಲ್ಲರೂ ನಾನಾ ಯೋಚನೆಗಳಲ್ಲಿ

ಸಮರಸೇನನು ಆಲೋಚನಾ ಮಗ್ನನಾಗಿರುವಾಗ ಆತನ ಅನುಚರರು ತಮ್ಮ ದ್ವೀಪಕ್ಕೆ ಎಂದು ಹಿಂತಿರುಗುವೆವೋ ಎಂದು ಕಾತುರರಾಗಿದ್ದರು. ಅವರಿಗೆ ಧನದಮೇಲೆ ಎಳ್ಳಷ್ಟೂ ಆಶೆಯಿರಲಿಲ್ಲ. ಇಷ್ಟೊಂದು ವಿಪತ್ತು ಪ್ರಮಾದಗಳೂ ಅದರಿಂದಲೇ ಸಂಭವಿಸಿದುವೆಂದು ಕೋಪದಿಂದ ಹಿಡಿಮಿಡಿಗುಟ್ಟುತ್ತಿದ್ದರು.

"ಸೇನಾನಿಯೇ, ನಾವು ಈ ದ್ವೀಪವನ್ನು ಬಿಟ್ಟು ಹೋಗುವುದು ಉತ್ತಮ. ನೀವು ತಕ್ಕ ಪ್ರಯತ್ನಗಳನ್ನು ಮಾಡಿರಿ" ಎಂದ ಒಬ್ಬ ಸೈನಿಕ. ತಮ್ಮೆಲ್ಲರ ಅಭಿಲಾಷೆಯೂ ಅದೇ ಎನ್ನುವಂತೆ ಮಿಕ್ಕವರೂ ಸಹ ಆತನ ಮಾತಿಗೆ ತಲೆಯಾಡಿಸಿದರು. ಆಗ ಸಮರಸೇನನು ಒಂದುಬಾರಿ ಸೈನಿಕರಕಡೆ ದೃಷ್ಟಿಬೀರಿದ









ಮುಳುಗಿರುವಾಗ ಎಲ್ಲಿಂದಲೋ ರಿವ್ವನೆ ಒಂದು ಬಾಣ ಬಂದು ಸಮರಸೇನನ ಒರಗಿಕೊಂಡು ಕುಳಿತಿದ್ದ ಮರಕ್ಕೆ ನಾಟಿಕೊಂಡಿತು. ಸಮರ ಸೇನನ ತಲೆಗೆ ಕೇವಲ ಒಂದೇ ಒಂದು ಅಡಿ ಮೇಲೆ ಆ ಬಾಣ ನಾಟಿಕೊಂಡಿತು. ಮರು ಕ್ಷಣವೇ ಸಮರಸೇನನು ಧಿಗ್ಗನೆದ್ದು "ಎಲ್ಲರೂ ಕೂಡಲೇ ಮರದ ಮರೆಗೆ ಹೋಗಿ ನಿಲ್ಲಿ. ಕುಂಭಾಂಡನು ಎಲ್ಲಿಂದಲೋ ಮರೆಯಿಂದ ನಮ್ಮನ್ನು ಕೊಲ್ಲಲು ಹವಣಿಸುತ್ತಿರುವನು." ಎಂದು ಹೇಳಿದನು. ಒಂದೆರಡು ಕ್ಷಣ ಅತ್ತ ಇತ್ತ ನೋಡಿ "ಬನ್ನಿ" ಎಂದು ಸಮರಸೇನನು ಓಡಲು ಪ್ರಾರಂಭಿಸಿದನು. ಸೈನಿಕರು ಆತ ನನ್ನು ಹಿಂಬಾಲಿಸಿದರು. ಮರುಕ್ಷಣದಲ್ಲೇ, "ಹಿಡಿಯಿರಿ, ಬಡಿಯಿರಿ" ಎಂಬ ಕುಂಭಾಂಡನ ಕೂಗಾಟ ಕೇಳಿಸಿತು. ಕಾಡುಜನರು ಅರಣ್ಯ ವೆಲ್ಲಾ ಪ್ರತಿಧ್ವನಿಸುವಂತೆ ಅರಚುತ್ತಾ ಮರ ಗಿಡಗಳ ಮರೆಯಿಂದ ಹೊರಬರುತ್ತಿದ್ದರು.

ಸಮರಸೇನನು ತಾನು ಇಕ್ಕಟ್ಟಿನಲ್ಲಿ ಸಿಲು ಕಿದೆನೆಂದು ಗ್ರಹಿಸಿದ. ತನ್ನೊಂದಿಗೆ ಕೇವಲ ಐದುಜನ ಸೈನಿಕರ ಸಹಾಯದಿಂದ ಎಲ್ಲಕಡೆ ಯಿಂದಲೂ ಸುತ್ತುಗಟ್ಟುತ್ತಿದ್ದ ಕಾಡುಜನ ರನ್ನು ಎದುರಿಸುವುದು ಅಪಾಯಕರವೆಂದು ತೋರಿತು. ಅಲ್ಲಿಂದ ಪಲಾಯನಕ್ಕೇ ನಿರ್ಣ ಯಿಸಿಕೊಂಡ. ದಾರಿಗೀರಿಯಿಲ್ಲದ ಆ ಪ್ರದೇಶ ದಿಂದ ಹೊರಬೀಳಲು ಅವರು ಓಡಲು ಪ್ರಾ ರಂಭಿಸಿದರು. ಕುಂಭಾಂಡನು ಕಾಡುಜನರನ್ನು ಹುರಿದುಂಬಿಸುತ್ತಾ ಹಿಂಬಾಲಿಸುತ್ತಿದ್ದನು. ಗುಬುರಾಗಿ ಬೆಳೆದಿದ್ದ ಮರಗಳ ಮರೆ







ಉತ್ತಮವೆಂದು ಸಮರಸೇನನಿಗೆ ತೋರಿತು. ಅನಿರೀಕ್ಷಿತವಾಗಿ ಅವರಿಗೆದುರಾಗಿ ದೊಡ್ಡದೊಂದು ಗುಹೆ ಕಾಣಿಸಿತು.

ಸೈನಿಕರು ತಮ್ಮ ನಾಯಕನ ಅಭಿಮತವನ್ನು ಗ್ರಹಿಸಿದವರಂತೆ ಅತ್ತಕಡೆ ನಾಲ್ಕು ಹೆಜ್ಜೆಯಿಟ್ಟರು. ಕೂಡಲೇ "ನಿಲ್ಲಿ" ಎಂದು ಸಮರಸೇನನು ಆಜ್ಞೆಮಾಡಿದ. "ಅವಸರಪಟ್ಟು ಗುಹೆಯೊಳಕ್ಕೆ ಪ್ರವೇಶಿಸುವುದು ಅಪಾಯಕರ. ಸಿಂಹ ಮುಂತಾದ ಕ್ರೂರ ಮೃಗಗಳಿಗೆ ಅದು ಆವಾಸಸ್ಥಾನವಾಗಿರಲೂ ಬಹುದು" ಎಂದು ಎಚ್ಚರಿಸಿದ, ಸಮರಸೇನ.

"ಹಾಗಾದರೆ ಕುಂಭಾಂಡನ ಕಣ್ಣಿಗೆ ಬೀಳದೆ ನಾವು ತಪ್ಪಿಸಿಕೊಂಡು ಹೋಗುವುದೆಂತು?" ಎಂದ ಒಬ್ಬ ಸೈನಿಕ.

"ಗುಹೆಯಲ್ಲಿ ಸಿಂಹ ಇರುವುದೂ ಇಲ್ಲದಿರುವುದೂ ಒಳಗೆ ಪ್ರವೇಶಮಾಡದೆ ಹೇಗೆ ತಿಳಿಯುವುದು?" ಎಂದು ಪ್ರಶ್ನೆ ಮಾಡಿದ ಮತ್ತೊಬ್ಬ ಸೈನಿಕ.

ಎರಡನೇ ಸೈನಿಕನ ಮಾತನ್ನು ಕೇಳಿ ಸಮರಸೇನನು ನಸುನಕ್ಕನು. ಸಿಂಹದ ಇರುವಿಕೆಯನ್ನು ತಿಳಿಯಲೋಸುಗ ಆ ಕತ್ತಲೆ ಗುಹೆಯಲ್ಲಿ ನುಗ್ಗಿದರೆ ಅವರು ಅದಕ್ಕೆ ಆಹಾರವಾಗುವುದು ಖಂಡಿತ.

"ನಿಮ್ಮಲ್ಲಿ ಇಬ್ಬರು ಕತ್ತಿಗಳನ್ನು ಹಿರಿದು ಸಿದ್ಧವಾಗಿರಿ. ನಾನು ಗುಹೆಯೊಳಕ್ಕೆ ಬಾಣವನ್ನು ಬಿಟ್ಟು ಸಿಂಹದ ನೆಲೆಯನ್ನು ಪರೀಕ್ಷಿಸುವೆನು. ಒಂದುವೇಳೆ ಇದ್ದರೆ ಅದು ಆರ್ಭಟ

ಯಲ್ಲಿ ಅವಿತುಕೊಳ್ಳುತ್ತಾ, ಸಮಯಸಿಕ್ಕಿದಾಗ ಓಡುತ್ತಾ, ಸಮರಸೇನನೂ ಆತನ ಅನುಯಾಯಿಗಳೂ ಸ್ವಲ್ಪದೂರ ಹೋದರು. ಆವೇಳೆಗೆ ಚಂದ್ರನ ಬೆಳಕು ಕ್ರಮೇಣ ಕ್ಷೀಣಿಸುತಿತ್ತು. ಕತ್ತಲಾವರಿಸುತ್ತಿದ್ದುದರಿಂದ ಸಮರಸೇನನಿಗೆ ತಪ್ಪಿಸಿಕೊಂಡು ಹೋಗಲು ಅನುಕೂಲವಾಯಿತು.

ಕೊನೆಗೆ ಎಲ್ಲರೂ ಒಂದು ಬೆಟ್ಟ ಪ್ರದೇಶವನ್ನು ಸೇರಿಕೊಂಡರು. ಕುಂಭಾಂಡನು ಮತ್ತು ಅವನ ಸಹಾಯಕರು ಇನ್ನೂ ತಮ್ಮನ್ನು ಹಿಂಬಾಲಿಸಿಕೊಂಡು ಬರುತ್ತಿರುವರೆಂದು ಅವರ ದಾಂಧಲೆಯಿಂದಲೇ ಅರಿತುಕೊಂಡ ಸಮರಸೇನ. ಯಾವುದಾದರೊಂದು ಗುಹೆಯಲ್ಲಿ ಅಂದು ರಾತ್ರಿ ಕಳೆಯುವುದು



ಸುತ್ತಾ ನಮ್ಮ ಮೇಲೆ ಬೀಳುವುದು. ಜಾಗ್ರತೆ" ಎಂದು ಎಚ್ಚರಿಕೆಕೊಟ್ಟ ಸಮರಸೇನ.

ಸಮರಸೇನನು ತನ್ನ ಬಲವನ್ನೆಲ್ಲಾ ಪ್ರಯೋಗಿಸಿ ಒಂದು ಬಾಣವನ್ನು ಗುಹೆಗೆ ಗುರಿನೋಡಿ ಬಿಟ್ಟ. ಅವನ ಊಹೆ ನಿಜವಾಯಿತು. ಮರುಕ್ಷಣವೇ ಭಯಂಕರವಾಗಿ ಗರ್ಜಿಸುತ್ತಾ ಒಂದು ಸಿಂಹವು ಹೊರಗೆ ಬಂತು. ಕತ್ತಿಹಿರಿದು ಸಿದ್ಧರಾಗಿದ್ದ ಸೈನಿಕರು ಅದರ ಮೇಲೆ ಹಾರಿದರು. ಆದರೆ ಅದು ಸ್ವಲ್ಪ ಹಿಂದಕ್ಕೆ ಬಾಗಿ ನಂತರ ತುರ್ರನೆ ಅಡವಿಯೊಳಕ್ಕೆ ಓಡಿಹೋಯಿತು.



ಸಮರಸೇನನು ಕತ್ತಿಯನ್ನು ಹಿಡಿದುಕೊಂಡು ನಡೆಯುತ್ತಿದ್ದರೂ ಗುಹೆಯ ಒಳಗೆ ಅಡಿಯಿಡಲು ಅವನಿಗೆ ಯಾವುದೋ ನರಳಾಡುತ್ತಿರುವ ಧ್ವನಿ ಕೇಳಿಸಿತು. ಸಮರಸೇನನು ಪಕ್ಕನೆ ಒಂದು ಹೆಜ್ಜೆ ಹಿಂದಿಟ್ಟ.

"ಗುಹೆಯಲ್ಲಿ ಗಾಯಗೊಂಡ ಮತ್ತೊಂದು ಸಿಂಹವಿದೆ. ಅದು ಯಾವ ಪರಿಸ್ಥಿತಿಯಲ್ಲಿರುವುದೋ ತಿಳಿಯದೆ ಒಳಗೆ ನುಗ್ಗುವುದು ಹಾನಿಕರ. ಹೊರಗೆ ಸ್ವಲ್ಪ ಬೆಂಕಿಮಾಡಿ" ಎಂದ.

ಕೂಡಲೇ ಸೈನಿಕರು ಚಕಮುಕಿ ಕಲ್ಲಿನ ಸಹಾಯದಿಂದ ಗುಹೆಯ ದ್ವಾರದ ಬಳಿ ಬೆಂಕಿ ಮಾಡಿದರು. ಒಂದು ಬಟ್ಟೆಯ ಚೂರಿಗೆ ಬೆಂಕಿಹಚ್ಚಿ, ಅದರ ಸಹಾಯದಿಂದ ಸಮರಸೇನನು ಗುಹೆಯ ಒಳಭಾಗವನ್ನೆಲ್ಲಾ ಪರೀಕ್ಷಿಸಿ ನೋಡಿದನು. ಅಲ್ಲಿ ಎರಡು ಸಿಂಹದ ಮರಿಗಳಿದ್ದವು. ಅವುಗಳಲ್ಲಿ ಒಂದು ಬಾಣದ ಪೆಟ್ಟನ್ನು ತಾಳಲಾರದೆ ನರಳಾಡುತ್ತಿತ್ತು. ಅದರ ಪಕ್ಕದಲ್ಲೇ ಮತ್ತೊಂದು ಸಣ್ಣಮರಿ ಕೂಗುತ್ತಿರುವುದು ಕಾಣಿಸಿತು.

"ಭಯವಿಲ್ಲ, ಒಳಗೆ ಬನ್ನಿ" ಎಂದು ಸಮರಸೇನನು ತನ್ನ ಸೈನಿಕರಿಗೆ ಹೇಳಿ ಒಳಗೆ ನುಗ್ಗಿದ. ಗಾಯಗೊಳ್ಳದಿದ್ದ ಸಿಂಹದ ಮರಿ ಗರ್ಜಿಸುತ್ತಾ ಮೆಲ್ಲಮೆಲ್ಲನೆ ಹಿಂದಕ್ಕೆ ಹೋಗುತಿತ್ತು. ಸಮರಸೇನನು ತುಸವಾದರೂ ಅಂಜದೆ, ಮೆಲ್ಲನೆ ಸಿಳ್ಳುಹಾಕುತ್ತಾ ಅದರ ಕಡೆಗೆ ನಡೆದ. ಆ ಮರಿ ಗರ್ಜಿಸುವುದನ್ನು ನಿಲ್ಲಿಸಿ, ಒಂದು ಮೂಲೆಯಲ್ಲಿ ಅಡಗಿ ಕುಳಿತುಕೊಂಡಿತು. ಸಮರಸೇನನೂ, ಸೈನಿಕರೂ ಮತ್ತೊಂದು ಮೂಲೆಯಲ್ಲಿ ಕುಳಿತರು. ಆಗ ಹೊತ್ತು ಮೀರಿತ್ತು. ಕುಂಭಾಂಡನು



ಕಾಡುಜನರೊಂದಿಗೆ ಅರಣ್ಯವನ್ನೆಲ್ಲಾ ತಪಾಸು ಮಾಡುತ್ತಿರುವನೆಂದು ಅವರ ಕೂಗಾಟವೇ ಸೂಚಿಸುತಿತ್ತು. ತಾವು ಅಡಗಿರುವ ಗುಹೆ ಪತ್ತೆಯಾಗದಂತಿರಲು, ಗುಹೆಯ ಮುಂದೆ ಮಾಡಿದ್ದ ಬೆಂಕಿಯನ್ನು ಆರಿಸುವಂತೆ ತನ್ನ ಸೈನಿಕರಿಗೆ ಹೇಳಿದ ಸಮರಸೇನ.

ಗುಹೆಯಲ್ಲಿ ಕತ್ತಲಾವರಿಸಿತ್ತು. ಬಾಣದ ಪೆಟ್ಟು ತಿಂದ ಸಿಂಹದಮರಿ ಸತ್ತುಹೋಯಿತು. ಗುಹೆಯ ಒಂದು ಮೂಲೆಯಲ್ಲಿ ಅಡಗಿದ್ದ ಮತ್ತೊಂದು ಮರಿ ಆಗಾಗ ಆರ್ಭಟಿಸುತಲಿತ್ತು. ಹೊರಕ್ಕೆ ಓಡಿದ ಸಿಂಹ ತನ್ನ ಮರಿಗಳಿಗಾಗಿ ಮತ್ತೆ ಗುಹೆಗೆ ಬರಬಹುದೆಂಬ ಭಯ ಸಮರಸೇನನಿಗೆ ಉಂಟಾಯಿತು. ಅಷ್ಟೇ ಅಲ್ಲದೆ ಕುಂಭಾಂಡನೂ, ಕಾಡುಜನರೂ ತಮಗಾಗಿ ಆ ಪ್ರಾಂತವನ್ನೆಲ್ಲಾ ಶೋಧಿಸುವರೆಂಬ ಅಂಶ ಆತನಿಗೆ ತಿಳಿದಿದೆ.

ಸಮರಸೇನನೂ, ಆತನ ಸೈನಿಕರೂ ಕಣ್ಣು ಮುಚ್ಚಲೂ ಸಹ ಭಯಪಡುತ್ತಿದ್ದರು. ಬರುತ್ತಿದ್ದ ನಿದ್ದೆಯನ್ನು ನಿವಾರಿಸುತ್ತಾ ಅವರು ಹಾಗೇ ಎಚ್ಚರವಾಗಿ ಕುಳಿತಿದ್ದರು. ಒಂದು ವೇಳೆ ಹಠಾತ್ತನೆ ಕುಂಭಾಂಡನು ತನ್ನ ಸಂಗಡಿಗರೊಂದಿಗೆ ಗುಹೆಯ ದ್ವಾರವನ್ನು ಅಡ್ಡಗಟ್ಟಿದರೆ ಏನುಗತಿ? ತಮಗೆ ಸಾವು ಖಂಡಿತ. ಆದುದರಿಂದ ಸೈನಿಕರನ್ನು ಸಮೀಪದಲ್ಲಿದ್ದ ಮರಗಳಮೇಲೇರಿಸಿ, ಬೇಹುಗಾರರಾಗಿರುವಂತೆ ಮಾಡುವುದು ಉಚಿತವೆಂದು ತೋರಿತು. "ನಾವೆಲ್ಲರೂ ಇಲ್ಲೇ ಕುಳಿತಿರುವುದರಿಂದ




ಪ್ರಯೋಜನವಾಗುವುದಕ್ಕಿಂತಲೂ ಪ್ರಮಾದವೇ ಹೆಚ್ಚು. ನೀವು ಅಲ್ಲಿ ಕಾಣಿಸುತ್ತಿರುವ ಮರಗಳನ್ನೇರಿ, ಕುಂಭಾಂಡನ ಚಟುವಟಿಕೆಗಳನ್ನು ಗಮನಿಸಿ" ಎಂದು ಹೇಳಿದ.

ಸೈನಿಕರು ತಮ್ಮ ಆಯುಧಗಳನ್ನು ತೆಗೆದುಕೊಂಡು ಗುಹೆಯಿಂದ ಹೊರಬಿದ್ದರು. ಒಬ್ಬೊಬ್ಬರು ಒಂದೊಂದು ಕಡೆ ಹೋಗಿ ಮರಗಳನ್ನೇರಿದರು. ಕುಂಭಾಂಡನು ಅಲ್ಲಿ ಎಲ್ಲಿಯಾದರೂ ಇರುವನೇನೋ ಎಂದು ಸೂಕ್ಷ್ಮವಾಗಿ ಪರಿಶೀಲಿಸಿ ನೋಡುತ್ತಿದ್ದರು.

ಗುಹೆಯಲ್ಲಿ ಒಂಟಿಯಾಗಿ ಕುಳಿತಿದ್ದ ಸಮರಸೇನನಿಗೆ ಸನಿಯದಲ್ಲೇ ಯಾರೋ ಸಂಭಾಷಿಸುತ್ತಿರುವ ಸದ್ದು ಕೇಳಿಸಿತು. ತನ್ನ ಸೈನಿಕರ ಧ್ವನಿಯಲ್ಲವೆಂದು ಆತನಿಗೆ ಖಂಡಿತವಾಗಿ







ಗೊತ್ತು. ಒಂದುವೇಳೆ ಕುಂಭಾಂಡನ ಗುಂಪಿ ನವರದಿರಬಹುದೆಂಬ ಅನುಮಾನ ವುಂಟಾ ಯಿತು. ಆತನು ಮೆಲ್ಲನೆ ಗುಹೆಯದ್ವಾರದ ಬಳಿಗೆ ತೆವಳಿಕೊಂಡು ಬಂದು, ಹೊರಗೆ ಇಣಿಕಿ ನೋಡಿದನು. ಅಲ್ಲಿ ಯಾರೂ ಇರಲಿಲ್ಲ. ಬಂದದಾರಿಗೆ ಸುಂಕವಿಲ್ಲವೆಂದುಕೊಂಡು ಮತ್ತೆ ಗುಹೆಯ ಮೂಲೆಗೆ ಹೋಗಿ ಕುಳಿತು ಕೊಂಡನು. ಈಸಾರಿ ಮಾತುಗಳು ಮತ್ತಷ್ಟು ಸ್ಪಷ್ಟವಾಗಿ ಕೇಳಿಬರುತಿದ್ದುವು.

ಸಮರಸೇನನಿಗೆ ಇದು ಸೋಜಿಗವಾಗಿ ಕಾಣಿಸಿತು. ಈ ಗುಹೆಯಲ್ಲಿ ಯಾವುದೋ ಒಂದು ರಹಸ್ಯಮಾರ್ಗವಿರಲೇ ಬೇಕೆಂದು ಆತನಿಗೆ ತೋರಿತು. ಧ್ವನಿಬಂದಕಡೆ ಕಿವಿ ಗೊಟ್ಟು ಕೇಳಲು, ಗುಹೆಯ ಹಿಂಭಾಗದಲ್ಲಿ ಯಾರೋ ಮಾತನಾಡುತ್ತಿರುವುದು ವ್ಯಕ್ತ ವಾಯಿತು. ಸಮರಸೇನನ ಆಶ್ಚರ್ಯಕ್ಕೆ ಅಂತ್ಯವಿಲ್ಲ. ಈ ಭಾರಿ ಬೆಟ್ಟದಲ್ಲಿದ್ದ ಗುಹೆಯ ಹಿಂಭಾಗಕ್ಕೆ ಮಾನವಮಾತ್ರರು ಹೇಗೆ ಹೋದರೋ ಆತನಿಗೆ ಅರ್ಥವಾಗಲಿಲ್ಲ. ರಹಸ್ಯಮಾರ್ಗವು ಯಾವುದಾದರೂ ಸಿಕ್ಕ ಬಹುದೆಂದು ಆತನು ಗುಹೆಯ ಒಳಭಾಗವ ನ್ನೆಲ್ಲಾ ಪರಿಶೋಧಿಸ ಲಾರಂಭಿಸಿದನು.

ಹಠಾತ್ತನೆ ಆತನ ಕೈಗೆ ಮೊಳೆಯಂಥ ವಸ್ತುವೊಂದು ಸಿಕ್ಕಿತು. ಸಮರಸೇನನು ಅದನ್ನು ಹಿಡಿದು ಬಲವಾಗಿ ಎಳೆದನು. ಕೂಡಲೇ ಬಂಡೆಗೆ ಹುದುಗಿಸಿರುವ ಬಾಗಿಲು ತೆರೆದುಕೊಂಡಿತು. ಅದರಿಂದ ಚಂದ್ರನ ಬೆಳಕು ಗುಹೆಯೊಳಕ್ಕೆ ಪ್ರವೇಶಿಸಿತು. ಅಲ್ಲಿಗೆ ಕೆಲವು ಗಜ ದೂರದಲ್ಲಿ ಮೂವರು ಮಾನವರು ಮಾತನಾಡುತ್ತಿರುವುದನ್ನು ಸಮರಸೇನನು ನೋಡಿದನು. ಅವರ ಉಡಿಗೆ ತೊಡಿಗೆಗಳಿಂದ ಕಾಡುಜನರಂತೆ ತೋರಲಿಲ್ಲ. ವಿವಿಧ ಬಣ್ಣದ ಬಟ್ಟೆಗಳನ್ನು ಅವರು ಧರಿಸಿದ್ದರು.

ಸಮರಸೇನನು ಮುಂದಿನ ಕಾರ್ಯವನ್ನು ಆಲೋಚಿಸುತ್ತಿರಲು, ಅವರ ದೃಷ್ಟಿ ಈತನ ಮೇಲೆ ಬಿತ್ತು. ಅಪಾಯ ಒದಗಬಹುದೆಂದು ಅನುಮಾನಗೊಂಡು ದ್ವಾರವನ್ನು ಮುಚ್ಚು ವಷ್ಟರಲ್ಲಿ ಅವರು ಹಠಾತ್ತನೆ ಸಮರಸೇನನ ಮೇಲೆಬಿದ್ದು ಆತನನ್ನು ನಿರಾಯುಧನನ್ನಾಗಿ ಮಾಡಿ ಬಂಧಿಸಿದರು. [ಇನ್ನೂ ಇದೆ]






# ಸೌಂಜ್ಞೆಗಳ ಪಂಡಿತ

**ಪೂ**ರ್ವಕಾಲದಲ್ಲಿ ಕಂಚಿಯಲ್ಲಿ ಒಬ್ಬ ಪಂಡಿತನಿದ್ದ. ಆತನನ್ನು ಜನ "ಸೌಂಜ್ಞೆಗಳಪಂಡಿತ" ಎಂದು ಕರೆಯುತ್ತಿದ್ದರು. ಜನತೆ ತಮ್ಮ ಅಭಿಪ್ರಾಯಗಳನ್ನು ಮಾತುಗಳಮೂಲಕ ವ್ಯಕ್ತಪಡಿಸುವುದರಬದಲು ಸೌಂಜ್ಞೆಗಳಮೂಲಕ ತಿಳಿಸುವುದು ಉತ್ತಮವೆಂದು ಆತನು ಪ್ರಚಾರ ಮಾಡುತ್ತಿದ್ದ. ಮತ್ತು ಸೌಂಜ್ಞೆಗಳ ಮೂಲಕನೇ ವ್ಯವಹರಿಸುತ್ತಿದ್ದ.

ಆ ಪಂಡಿತನು ಒಂದು ದಿವಸ ರಾಜನಲ್ಲಿಗೆ ಹೋಗಿ ಈ ಸಂಗತಿಯನ್ನು ಹೇಳಿದ. ರಾಜನು ಮಂದಹಾಸಬೀರಿ,

"ಈ ವಿಚಾರ ತಿಳಿಸಲು ನಮ್ಮಲ್ಲಿಗೆ ಕಾರ್ಯಕ್ರಮ ವಿಟ್ಟುಕೊಂಡು ಬಂದಿರಾ? ಈ ವಿಚಾರ ನಮಗೆ ಹೊಸತಲ್ಲ. ನಾವು ಬಹಳ ದಿನಗಳ ಹಿಂದೆಯೇ ಒಬ್ಬ ಸೌಂಜ್ಞೆಗಳ ಶಾಸ್ತ್ರಿಯನ್ನು ಶಿವಗಂಗಾಪುರದ ಪಾಠಶಾಲೆಯಲ್ಲಿ ನೇಮಿಸಿರುತ್ತೇವೆ" ಎಂದು ಹೇಳಿದ.

ರಾಜನು ವಿನೋದಕ್ಕಾಗಿ ಹೇಳಿದ ಈ ಮಾತುಗಳನ್ನು ಆ ಪಂಡಿತನು ನಿಜವೆಂತಲೇ ಭಾವಿಸಿ ಮೆಚ್ಚಿಕೊಂಡ. "ಮಹಾರಾಜ, ತಾವು ತುಂಬಾ ದೂರ ದೃಷ್ಟಿಯುಳ್ಳವರು. ಚಿಕ್ಕಂದಿನಲ್ಲೇ ಈ ಸೌಂಜ್ಞಾ ಶಾಸ್ತ್ರವನ್ನು ಕಲಿಸುವುದರಿಂದ ತುಂಬಾ ಮೇಲಾಗುವುದು. ನಾನು ಆ ಶಾಸ್ತ್ರಿಗಳನ್ನು ನೋಡಿಕೊಂಡು ಬರುವೆನು. ಅಪ್ಪಣೆ ಕೊಡೋಣವಾಗಲಿ" ಎಂದು ಹೇಳಿ ಮಹಾರಾಜನಿಗೆ ನಮಸ್ಕಾರ ಮಾಡಿ, ಆ ಪಂಡಿತೋತ್ತಮನು ಶಿವಗಂಗಾಪುರಕ್ಕೆ ಹೊರಟ.

ಪಂಡಿತನು ಆರೀತಿ ಹೊರಟು ನಿಲ್ಲುವನೆಂದು ರಾಜನು ಊಹಿಸಿರಲಿಲ್ಲ. ಆತನು ಶಿವಗಂಗಾಪುರಕ್ಕೆ ಹೋಗಿ ಅಲ್ಲಿ ವಿಚಾರಿಸಿದರೆ ತನ್ನ ಮಾತು ಅಸತ್ಯವೆಂದು ತಿಳಿದುಬಿಡುವುದು. ಆ ಪರಿಸ್ಥಿತಿಯುಂಟಾಗಬಾರದು. ಎಂದು ಯೋಚಿಸಿ ರಾಜನು ಕೂಡಲೇ ಒಬ್ಬ ಶೀಘ್ರಗಾಮಿಯಾದ ಸೇವಕನನ್ನು ಶಿವಗಂಗಾಪುರದ ಪಾಠಶಾಲೆಗೆ ಕಳುಹಿಸಿದ.

ಸೇವಕನು ಅಲ್ಲಿನ ಪಾಠಶಾಲಾಧಿಕಾರಿಯ ಹತ್ತಿರಕ್ಕೆ ಹೋಗಿ "ಸ್ವಾಮಿ, ಇಲ್ಲಿಗೆ ಒಬ್ಬ

ಎಂ. ವಿ. ಜಯಮ್ಮ



ಸೌಂಜ್ಞೆಗಳಪಂಡಿತ ಬರುವವನಿದ್ದಾನೆ. ಆತನನ್ನು ಹೇಗಾದರೂ ಮಾಡಿ ಉಪಾಯದಿಂದ ಮನೆಯದಾರಿ ಹಿಡಿಯುವಂತೆ ಮಾಡಿ. ಇದು ಮಹಾರಾಜರ ಆಜ್ಞೆ" ಎಂದು ಹೇಳಿದ.

ಅನಂತರ ಒಂದೆರಡು ದಿನಗಳಿಗೆ ಸೌಂಜ್ಞೆಗಳಪಂಡಿತನು ಶಿವಗಂಗಾಪುರದ ಪಾಠಶಾಲೆಯನ್ನು ಸೇರಿದ.

ಅಲ್ಲಿನ ಪಾಠಶಾಲಾಧಿಕಾರಿಗಳು ಆತನನ್ನು ಸತ್ಕರಿಸಿ "ಪಂಡಿತೋತ್ತಮರೇ, ನಮ್ಮ ಶಾಸ್ತ್ರಿಗಳು ದೇಶಾಟನೆಗೆ ಹೊರಟು ಒಂದು ತಿಂಗಳಾಯಿತು. ಇಷ್ಟರಲ್ಲೇ ಬರಲಾರರು. ಕೆಲವು ದಿನ ಹಿಡಿದೀತು" ಎಂದು ತಿಳಿಸಿದರು.

"ಸರಿ, ಇಷ್ಟು ದೂರ ಬಂದು ಆತನನ್ನು ಕಾಣದೆ ಹೇಗೆ ಹಿಂತಿರುಗಲಿ? ಆತನು ದೇಶಸಂಚಾರ ಮುಗಿಸಿ, ವಾಪಸು ಬರುವತನಕ ಇಲ್ಲೇ ಇರುತ್ತೇನೆ" ಎಂದನು ಆ ಪಂಡಿತ.

ಪಾಠಶಾಲಾಧಿಕಾರಿಗೆ ಪಂಡಿತನು ಹಠಮಾರಿ, ಛಲವಾದಿ ಎಂದು ತಿಳಿಯಿತು. ಮೂರನೆಯದಿನ ಒಬ್ಬ ಒಕ್ಕಣ್ಣು ಸೇವಕನಿಗೆ ಪಂಡಿತನ ವೇಷ ಹಾಕಿದರು. ಆತನಿಗೆ ಹೇಳಬೇಕಾದುದನ್ನೆಲ್ಲಾ ಹೇಳಿ, "ಆ ಸೌಂಜ್ಞೆಗಳ ಪಂಡಿತನು ಸೌಂಜ್ಞೆಗಳ ಮೂಲಕ ಹೇಳುವ ಪ್ರತಿಯೊಂದಕ್ಕೂ ನೀನು ಸನ್ನೆಯಿಂದಲೇ ಉತ್ತರ ಕೊಡು. ಎಂತಹ ಪರಿಸ್ಥಿತಿಯೊದಗಿಬಂದರೂ ಬಾಯಿ ಬಿಡಬೇಡ" ಎಂದು ಎಚ್ಚರಿಸಿದರು.

ತರುವಾಯ ಸೌಂಜ್ಞೆಗಳ ಪಂಡಿತನಬಳಿಗೆ ಬಂದು "ಅಯ್ಯಾ, ನಮ್ಮ ಶಾಸ್ತ್ರಿಗಳು ಅನಿರೀಕ್ಷಿತವಾಗಿ ಸಂಚಾರ ಮುಗಿಸಿಕೊಂಡು ವಾಪಸು ಬಂದಿರುತ್ತಾರೆ. ಅದೋ, ಆ ಕೊಠಡಿಯಲ್ಲಿರುವರು. ನೀವು ಅವರ ದರ್ಶನ ಪಡೆಯಬಹುದು" ಎಂದರು ಆ ಪಾಠಶಾಲಾಧಿಕಾರಿ.

ಸೌಂಜ್ಞೆಗಳ ಪಂಡಿತನು ಆ ಕೊಠಡಿಗೆ ಹೋದ. ಅಲ್ಲಿ ಪಂಡಿತರು ಶಾಲನ್ನು ತಲೆಗೆ ಸುತ್ತಿಕೊಂಡು ಗಂಭೀರವಾಗಿ ಕುಳಿತಿದ್ದ ಒಕ್ಕಣ್ಣ ಕಾಣಿಸಿದ. ಪಂಡಿತನು ಆತನಿಗೆ ಒಂದು ಬೆರಳನ್ನು ತೋರಿಸಿದನು. ಒಕ್ಕಣ್ಣನು ಎರಡು ಬೆರಳುಗಳನ್ನು ತೋರಿಸಿದ. ಆಗ ಪಂಡಿತನು ಮೂರು ಬೆರಳುಗಳನ್ನು ತೋರಿಸಿದ. ಅದನ್ನು ನೋಡಿ ಒಂಟಿಕಣ್ಣಿನಶಾಸ್ತ್ರಿ ಕುಪಿತನಾಗಿ ಮುಷ್ಟಿ ಬಿಗಿಹಿಡಿದು ಪಂಡಿತನ ಕಡೆ ತೋರಿಸಿ ಆಡಿಸಿದ.

ಆಗ ಪಂಡಿತನು ನಗುತ್ತಾ ತನ್ನಲ್ಲಿದ್ದ ಬೋರೆಹಣ್ಣನ್ನು ಶಾಸ್ತ್ರಿಗೆ ತೋರಿಸಲು, ಆತನು ತನ್ನಲ್ಲಿದ್ದ ರೊಟ್ಟಿಯ ಚೂರೊಂದನ್ನು ಸೌಂಜ್ಞಿಗಳ ಪಂಡಿತನ ಮುಂದೆ ಹಿಡಿದ. ಕೂಡಲೇ ಸೌಂಜ್ಞಿಗಳ ಪಂಡಿತನು ಒಕ್ಕಣ್ಣ ಶಾಸ್ತ್ರಿಗಳಿಗೆ ಭಯಭಕ್ತಿಯಿಂದ ನಮಸ್ಕಾರ ಮಾಡಿ ಹೊರಗೆ ಬಂದ.

ಅಲ್ಲಿ ಕಾದಿದ್ದ ಪಾಠಶಾಲಾಧಿಕಾರಿ "ಪಂಡಿತರೇ, ನಮ್ಮ ಶಾಸ್ತ್ರಿಗಳನ್ನು ಕುರಿತು ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿದರು. ಅದಕ್ಕೆ ಪಂಡಿತನು,

"ನಿಮ್ಮ ಶಾಸ್ತ್ರಿಗಳು ತುಂಬಾ ಸಮರ್ಥರು. ಭಾರಿ ತತ್ವಜ್ಞಾನಿ. ನಾನು ದೇವರು ಒಬ್ಬನೇ ಎಂದು ಸೂಚಿಸಲು ಒಂದು ಬೆರಳು ತೋರಿಸಿದೆ. ಅವರು ಹರಿ-ಹರ ಇಬ್ಬರೆಂದು ಎರಡು ಬೆರಳು ತೋರಿಸಿದರು. ಬ್ರಹ್ಮನೂ ಸೇರಿ ತ್ರಿಮೂರ್ತಿಗಳು ಮೂವರಲ್ಲವೇ ಎಂದು ನಾನು ಮೂರು ಬೆರಳುಗಳನ್ನು ತೋರಿಸಿದೆ. ಅವರು ಮೂವರೂ ಒಂದೇ ಎಂದು ಮುಷ್ಟಿ ಬಿಗಿಹಿಡಿದು ಸೂಚಿಸಿದರು ಶಾಸ್ತ್ರಿಗಳು.

ಆಗ ನಾನು ದೇವರು ಪರಮ ದಯಾಳುವೆಂದು ಸೂಚಿಸಲು, ಆತನು ಮಾನವಕೋಟಿಗೆ ಪ್ರಸಾದಿಸಿರುವ ಅತ್ಯಂತ ರುಚಿಯಾದ ಬೋರೆ ಹಣ್ಣನ್ನು ತೆಗೆದು ತೋರಿಸಿದೆ.

ಅದಕ್ಕೆ ಆ ಪರಮ ತತ್ವಜ್ಞಾನಿ ತಮ್ಮಲ್ಲಿದ್ದ ರೊಟ್ಟಿಯ ಚೂರನ್ನು ನನಗೆ ತೋರಿಸಿ, ಭೋಗವಸ್ತುವಾದ ಬೋರೆ ಹಣ್ಣಿಗಿಂತಲೂ ಸರ್ವ ಜನೋಪಯುಕ್ತವಾಗಿರುವ ಈ



ರೊಟ್ಟೆಯ ಚೂರು ಶ್ರೇಷ್ಠವಾದುದೆಂದು ನನಗೆ ಪಾರಮಾರ್ಥಿಕವನ್ನು ಬೋಧಿಸಿದರು." ಎಂದು ಹೇಳಿ, ಅವರಿಂದ ಅಪ್ಪಣೆ ಪಡೆದುಕೊಂಡು ತನ್ನ ಸ್ಥಾನಕ್ಕೆ ಹಿಂತಿರುಗಿದ ಆ ಸೌಂಜ್ಞೆಗಳ ಪಂಡಿತ.

ನಂತರ ಪಾಠಶಾಲಾಧಿಕಾರಿ ವೇಷಧಾರಿ ಏಕನೇತ್ರ ಸೇವಕನನ್ನು ಕರೆದು ಒಳಗೆ ಏನು ನಡೆಯಿತೆಂದು ವಿಚಾರಿಸಿದರು.

"ಸ್ವಾಮಿ, ಆ ಪಂಡಿತನು ತುಂಬಾ ದುರ್ಮಾರ್ಗನಂತೆ ತೋರುವನು. ಕೊಠಡಿಯನ್ನು ಪ್ರವೇಶ ಮಾಡುತ್ತಿದ್ದಹಾಗೆಯೇ ನನ್ನ ತಪ್ಪು ಹ.ಡುಕಲು ಒಂದು ಬೆರಳೆತ್ತಿ "ನಿನಗೆ ಒಂದು ಕಣ್ಣಿಲ್ಲವೇ?" ಎಂದು ಸೌಂಜ್ಞೆ ಮಾಡಿದ. ಅದಕ್ಕೆ ನಾನು ಕುಪಿತನಾಗಿ ನಿನ್ನ ಎರಡು ಕಣ್ಣುಗಳಿಗಿಂತ ನನ್ನ ಒಕ್ಕಣ್ಣೇ ಮೇಲು ಎಂದು ಸೂಚಿಸಲು ಎರಡು ಬೆರಳು ತೋರಿಸಿದೆ. ನಿನ್ನದೊಂದು ನನ್ನವೆರಡು ಸೇರಿದರೆ ಮೂರಾಯಿತೆಂದು ಮೂರು ಬೆರಳುಗಳನ್ನು ಆತ ನನಗೆ ತೋರಿಸಿದ. ಆತನ ಈ ವರ್ತನೆಯಿಂದ ನನಗೆ ಮಿತಿಮೀರಿದ ಕೋಪಬಂತು. ಮತ್ತೊಮ್ಮೆ ಹಾಗೆ ಎಗತಾಳಿ ಮಾಡಿದರೆ ಮೂಗಿನಮೇಲೆ ಪೆಟ್ಟು ಬೀಳುತ್ತದೆಂದು ಮುಷ್ಟಿ ಬಿಗಿ ಹಿಡಿದು ಎತ್ತಿದೆ. ಅದಕ್ಕೆ ಆತನು ತತ್ತರಗೊಂಡು, ನನ್ನನ್ನು ಬಲೆಗೆ ಹಾಕಿಕೊಳ್ಳಲು ತನ್ನಹತ್ತಿರವಿದ್ದ ಬೋರೆ ಹಣ್ಣನ್ನು ಲಂಚ ಕೊಡುವುದಾಗಿ ತೋರಿಸಿದ. ನಾನು ಅದರ ಆಸೆಗೆ ಬಲಿಯಾಗದೆ ನಿನ್ನ ಬೋರೆ ಹಣ್ಣು ಯಾರಿಗೆ ಬೇಕು? ನನ್ನ ರೊಟ್ಟಿಯ ಚೂರಿನ ಮುಂದೆ ಅದು ತೀರ ಅಲ್ಪವಾದುದು ಎಂದು ಹೇಳಲು ನನ್ನ ಬಳಿಯಿದ್ದ ರೊಟ್ಟಿಯ ಚೂರನ್ನು ತೋರಿಸಿದೆ.

"ಇನ್ನು ತನ್ನ ಬೇಳೆ ನನ್ನ ಹತ್ತಿರ ಬೇಯುವುದಿಲ್ಲವೆಂದು ಅರಿತು, ನನಗೆ ನಮುಸ್ಕಾರಮಾಡಿ ಹೊರಟುಬಿಟ್ಟ ಆ ದುರುಳ" ಎಂದು ವಿವರಣೆಯಿತ್ತ.

ಪಾಠಶಾಲಾಧಿಕಾರಿ ಈ ಎರಡು ವಿರುದ್ಧವಾದ ವಿವರಣೆಗಳನ್ನು ಕೇಳಿ ಹೊಟ್ಟೆ ಬಿರಿಯುವಂತೆ ನಕ್ಕರು. ರಾಜನಿಗೆ ಇಲ್ಲಿ ನಡೆದ ವಿಷಯುವನ್ನೆಲ್ಲಾ ಒಬ್ಬ ಸೇವಕನ ಮೂಲಕ ತಿಳಿಸಲು ರಾಜನಿಗೂ ನಗುಬಂತು.



# ಸೂಕ್ಷ್ಮದೃಷ್ಟಿ

CHITRA

ಪೂರ್ವಕಾಲದಲ್ಲಿ ಕಾಶೀ ನಗರದ ಸಮೀಪ ಒಬ್ಬ ಬ್ರಾಹ್ಮಣನು ವಾಸವಾಗಿದ್ದನು. ಆ ಬ್ರಾಹ್ಮಣನಿಗೆ ಹನ್ನೆರಡು ವರ್ಷದ ಮಗನಿದ್ದನು. ಅವನಿಗೆ ಹೆಜ್ಜೆಗುರುತಿನ ಜಾಡು ಕಂಡುಹಿಡಿಯುವುದರಲ್ಲಿ ಅಪಾರ ಪ್ರಜ್ಞೆಯಿತ್ತು. ಕಲ್ಲುಗಳ ಮೇಲೆ ಬಂಡೆಗಳಮೇಲೆ ಮನುಷ್ಯರು ನಡೆದರೂಸಹ ಹೆಜ್ಜೆಯ ಗುರುತುಗಳನ್ನು ಕಂಡುಹಿಡಿಯುತ್ತಿದ್ದನು. ಅವನಲ್ಲಿ ಈ ಶಕ್ತಿಯಿದ್ದುದರಿಂದ ಆವನನ್ನು ಎಲ್ಲರೂ ಸೂಕ್ಷ್ಮದೃಷ್ಟಿ ಎಂದು ಕರೆಯುತ್ತಿದ್ದರು.

ತಾವಿದ್ದ ಊರಿನಲ್ಲಿ ಹೊಟ್ಟೆಹೊರೆದುಕೊಳ್ಳುವುದು ಕಷ್ಟವಾಗಿದ್ದುದರಿಂದ, ಆ ಬ್ರಾಹ್ಮಣನು ತನ್ನ ಮಗನೊಂದಿಗೆ ಕಾಲುನಡಿಗೆಯಲ್ಲಿ ಕಾಶೀ ನಗರವನ್ನು ಸೇರಿಕೊಂಡನು. ಮಗನನ್ನು ಆಸ್ಥಾನಕ್ಕೆ ಕರೆದೊಯ್ದು ರಾಜನೊಂದಿಗೆ "ಮಹಾರಾಜನೇ, ನನ್ನ ಕುಮಾರ ಸೂಕ್ಷ್ಮದೃಷ್ಟಿ ಹೆಜ್ಜೆಯ ಗುರುತು ಕಂಡುಹಿಡಿಯುವುದರಲ್ಲಿ ಅಸಾಧಾರಣ ಪ್ರಜ್ಞೆಯುಳ್ಳವನು. ನಿಮ್ಮ ಆಸ್ಥಾನದಲ್ಲಿಟ್ಟುಕೊಂಡರೆ ನಿಮಗೆ ಚೋರಭಯವಿರುವುದಿಲ್ಲ" ಎಂದು ವಿನಯದಿಂದ ಅರಿಕೆ ಮಾಡಿಕೊಂಡ.

ಕಾಶೀನಗರದ ರಾಜ ಲೋಭಿ. ಅಷ್ಟೇ ಅಲ್ಲದೆ ಆ ಕಾಲದಲ್ಲಿ ಚೋರಭಯ ಬಹಳವಾಗಿತ್ತು. ಅಂತಲೇ ರಾಜನು ಸೂಕ್ಷ್ಮದೃಷ್ಟಿಯನ್ನು ತನ್ನ ಆಸ್ಥಾನದಲ್ಲಿ ನೇಮಿಸಿಕೊಳ್ಳಲು ನಿಶ್ಚಯಿಸಿಕೊಂಡು, ಸಂಬಳವೆಷ್ಟು ಬೇಕೆಂದು ಕೇಳಿದ. "ಮಹಾರಾಜ, ನನ್ನ ಮಗನಂತಹ ಸೂಕ್ಷ್ಮದೃಷ್ಟಿ ಈ ಪ್ರಪಂಚವೆಲ್ಲಾ ಶೋಧಿಸಿ ನೋಡಿದರೂ ಮತ್ತೊಬ್ಬನು ಸಿಗಲಾರನು. ಆದುದರಿಂದ ಇವನಿಗೆ ದಿನಕ್ಕೆ ನೂರು ವರಹಗಳ ಸಂಬಳ ಕೊಡಿಸಬೇಕು" ಎಂದ ಬ್ರಾಹ್ಮಣ.

ರಾಜನಿಗೆ ಇದು ಬಹು ಭಾರಿ ಸಂಬಳವಾಗಿ ತೋರಿತು. ಆದರೆ ಬ್ರಾಹ್ಮಣ ಅದಕ್ಕಿಂತಲೂ ಕಡಿಮೆ ತೆಗೆದುಕೊಳ್ಳಲು ಸಿದ್ಧವಾಗಿರಲಿಲ್ಲ. ವಿಧಿಯಿಲ್ಲದೆ ರಾಜನು ಸೂಕ್ಷ್ಮದೃಷ್ಟಿಯನ್ನು ದಿನಕ್ಕೆ ನೂರು ವರಹ ಸಂಬಳದ ಮೇಲೆ ತನ್ನ ಆಸ್ಥಾನದಲ್ಲಿ ಕೆಲಸಕ್ಕೆ ಇಟ್ಟುಕೊಂಡನು. ಈ ಸುದ್ದಿ ತಿಳಿದ ಕೂಡಲೇ






ಶಕ್ತಿಯಿರುವುದೇ ಎಂಬ ಅನುಮಾನವುಂಟಾಯಿತು. ಆ ಹುಡುಗನ ತಂದೆ ಹೇಳಿದ ಮಾತು ಹೊರತು ಬೇರೆ ಯಾವ ಆಧಾರವೂ ಇಲ್ಲ. ರಾಜನು ತನ್ನ ಮಂತ್ರಿಯೊಂದಿಗೆ ಈ ವಿಷಯ ಕುರಿತು ರಹಸ್ಯವಾಗಿ ಆಲೋಚನೆ ಮಾಡಿದ. ಇಬ್ಬರೂ ಸೇರಿ ಆ ಹುಡುಗನನ್ನು ಪರೀಕ್ಷಿಸಲು ನಿಶ್ಚಯಿಸಿದರು. ಅಂದು ರಾತ್ರಿ ಅವರಿಬ್ಬರೂ ಸೇರಿ ಖಜಾನೆಯನ್ನು ಲೂಟಿ ಮಾಡಿದರು. ಅನೇಕ ನಗನಾಣ್ಯಗಳನ್ನು ಗೋಣಿಚೀಲಗಳಲ್ಲಿ ತುಂಬಿದರು. ಆ ಚೀಲಗಳನ್ನು ತೆಗೆದುಕೊಂಡು ರಾಜಭವನದ ಸುತ್ತಲೂ ಮೂರುಬಾರಿ ಪ್ರದಕ್ಷಿಣೆಮಾಡಿ, ಉದ್ಯಾನವನದಿಂದ ಅರಮನೆಯ ಪೌಳಿಗೋಡೆಯನ್ನು ಹತ್ತಿ ಹೊರಕ್ಕೆಹಾರಿ, ದೂರದಲ್ಲಿದ್ದ ಭಾವಿಯೊಂದರಲ್ಲಿ ಆ ಚೀಲಗಳನ್ನು ಹಾಕಿ, ರಾಜಪ್ರಾಸಾದದ ಮುಖಾಂತರ ಸ್ವಗೃಹಗಳನ್ನು ಸೇರಿಕೊಂಡರು.

ನಗರದಲ್ಲಿದ್ದ ಭಾರಿ ಕಳ್ಳರಿಗೂಸಹ ಹೆದರಿಕೆಯುಂಟಾಯಿತು. ಅವರು ರಾಜಭವನದ ಕಡೆ ಸುಳಿಯುವುದನ್ನೇ ನಿಲ್ಲಿಸಿದರು. ಸೂಕ್ಷ್ಮದೃಷ್ಟಿ ದಿನಾ ಆಸ್ಥಾನಕ್ಕೆ ಬರುವನು. ಫಲಹಾರವನ್ನು ತೆಗೆದುಕೊಳ್ಳವನು. ಉದ್ಯಾನವನದಲ್ಲಿ ಚದುರಂಗದಾಟ ಆಡುವನು. ಮನೆಗೆ ಹಿಂತಿರುಗುವಾಗ ಖಜಾನೆಯಿಂದ ನೂರುವರಹ ತುಂಬಿದ ಚೀಲ ತೆಗೆದುಕೊಂಡು ಹೋಗುವನು. ಎಷ್ಟು ತಿಂಗಳಾದರೂ ರಾಜಭವನದಲ್ಲಿ ಒಂದು ಕಳ್ಳತನವಾಗಲೀ ನಡೆಯಲಿಲ್ಲ.

ಆಕಸ್ಮಾತ್ತಾಗಿ ರಾಜನಿಗೆ ಒಂದು ಸಂದೇಹವುಂಟಾಯಿತು. ದಿನಕ್ಕೆ ನೂರು ವರಹ ಸಂಬಳ ಪಡೆಯುತ್ತಿರುವ ಈ ಬ್ರಾಹ್ಮಣ ಯುವಕನಿಗೆ ಹೆಜ್ಜೆಯ ಗುರುತುಗಳನ್ನು ಕಂಡುಹಿಡಿಯುವ

ಬೆಳಗಾದ ಕೂಡಲೇ ಖಜಾನೆಯಲ್ಲಿ ಕಳ್ಳತನವಾಯಿತೆಂದು ಗದ್ದಲವಾಯಿತು. ಎಂದಿನಂತೆ ಸಭೆಗೆ ಹಾಜರಾಗಿದ್ದ ಸೂಕ್ಷ್ಮದೃಷ್ಟಿಯನ್ನು ಕುರಿತು ನೀವು ಕಳ್ಳರನ್ನೂ, ನಮ್ಮ ಧನವನ್ನೂ ಕಂಡುಹಿಡಿಯಬೇಕು" ಎಂದು ರಾಜನು ಆಜ್ಞೆಮಾಡಿದನು. "ಅಪ್ಪಣೆ" ಎಂದು ಸೂಕ್ಷ್ಮದೃಷ್ಟಿ ಖಜಾನೆಯ ಹತ್ತಿರಕ್ಕೆ ನಡೆದ.

ಆತನ ದೃಷ್ಟಿಗೆ ಇಬ್ಬರ ಹೆಜ್ಜೆ ಗುರುತುಗಳು ಕಾಣಿಸಿದುದು ಮಾತ್ರವಲ್ಲದೆ ಅವರ ಪಾದರೇಖೆಗಳು ಸಹ ಕಂಡುಬಂದುವು.



ಅದನ್ನು ನೋಡಿ ರಾಜ ಮತ್ತು ಮಂತ್ರಿ ಕೂಡಿ ತನ್ನನ್ನು ಪರೀಕ್ಷಿಸಲು ಈ ತಂತ್ರವನ್ನು ಹೂಡಿರುವರೆಂದು ಗ್ರಹಿಸಿದನು. ಕಳವಾದ ಮಾಲನ್ನು ಕಂಡುಹಿಡಿಯಬೇಕಾಗಿದ್ದುದರಿಂದ ಸೂಕ್ಷ್ಮದೃಷ್ಟಿ ಹೆಜ್ಜೆಯ ಗುರುತುಗಳನ್ನು ಹುಡುಕಿಕೊಂಡು ಹೊರಟ. ಆತನು ರಾಜಭವನದ ಸುತ್ತಲೂ ಮೂರುಬಾರಿ ಸುತ್ತಿದ. ತರುವಾಯ ಅರಮನೆಯ ಉದ್ಯಾನವನವನ್ನು ದಾಟಿ ಪ್ರಹರಿ ಗೋಡೆಯ ಹತ್ತಿರಕ್ಕೆ ಬಂದ. ಅದನ್ನೂ ದಾಟಿ ಭಾವಿಯಬಳಿಗೆ ಹೋದ.

ತನ್ನೊಂದಿಗೆ ಬಂದಿದ್ದ ನೌಕರರನ್ನು ಕುರಿತು "ಯಾರಾದರೂ ಈ ಭಾವಿಯಲ್ಲಿ ಇಳಿಯಿರಿ. ಇದರಲ್ಲಿ ಕಳೆದುಹೋದ ಮಾಲು ಸಿಗಬಹುದು. ಏಕೆಂದರೆ ಕಳ್ಳರು ಇಲ್ಲಿಂದ ಮತ್ತೆ ರಾಜಪ್ರಾಸಾದವನ್ನು ಪ್ರವೇಶಿಸಿದರು" ಎಂದ ಸೂಕ್ಷ್ಮದೃಷ್ಟಿ.

ತಕ್ಷಣವೇ ರಾಜಭಟರು ಭಾವಿಗೆಹಾರಿ ಗೋಣಿಚೀಲಗಳನ್ನು ಮೇಲಕ್ಕೆತಂದರು.

ಆಗ ರಾಜನು "ಭೇಷ್, ನೀನು ತುಂಬಾ ತಿಳುವಳಿಕೆಯುಳ್ಳವನು. ಮಾಲನ್ನೇ ನೋಡಿ ಕಂಡು ಹಿಡಿದೆ. ಕಳ್ಳರು ಯಾರೋ ಇನ್ನೂ ಕಂಡುಹಿಡಿಯಲಿಲ್ಲ" ಎಂದ. "ಬಿಡಿ, ಮಹಾಪ್ರಭೂ. ಹೋದ ಮಾಲು ಸಿಕ್ಕಿತಲ್ಲಾ, ಕಳ್ಳರ ಚಿಂತೆಯಾಕೆ" ಎಂದ ಸೂಕ್ಷ್ಮದೃಷ್ಟಿ.

"ಹಾಗೆಂದರೇನು? ದಿನಕ್ಕೆ ನಿನಗೆ ನೂರು ವರಹಗಳನ್ನು ಕೊಡುತ್ತಿರುವುದು ಕಳ್ಳರನ್ನು ಹಿಡಿಯಲಿಕ್ಕೆ" ಎಂದ.

"ಮಹಾರಾಜ, ಹೋದಮಾಲು ಕಂಡು ಹಿಡಿಯುವ ಮೊದಲೇ ಕಳ್ಳರನ್ನು ಅವರ ಪಾದರೇಖೆಗಳಿಂದ ಕಂಡು ಹಿಡಿದುಬಿಟ್ಟೆ."

"ಹಾಗಾದರೆ ಅವರು ಯಾರು? ಬೇಗ ಹೇಳು. ಕೂಡಲೇ ಅವರನ್ನು ಶಿಕ್ಷಿಸುವೆನು" ಎಂದ ರಾಜ.

"ಇಬ್ಬರು ಒಟ್ಟಿಗೆ ಸೇರಿ ಕಳ್ಳತನ ನಡೆಸಿದ್ದಾರೆ. ಆ ಇಬ್ಬರಲ್ಲಿ ಒಬ್ಬರು ಮಹಾಪ್ರಭುಗಳು, ಮತ್ತೊಬ್ಬರು ಮಹಾಪ್ರಧಾನಿಗಳು" ಎಂದ ಸೂಕ್ಷ್ಮದೃಷ್ಟಿ.

ರಾಜನು ವಿಸ್ಮಯಗೊಂಡ. ಬಳಿಕ ಸಂತೋಷಗೊಂಡು, ಮೆಚ್ಚಿ ಆತನ ಸಂಬಳವನ್ನು ದ್ವಿಗುಣಗೊಳಿಸಿದ.






# ನಾಲ್ವರು ಗೆಳೆಯರು

ಒಂದು ಊರಿನಲ್ಲಿ ನಾಲ್ವರು ತರುಣರಿದ್ದರು. ಅವರು ಬಾಲ್ಯಮಿತ್ರರು. ಅವರಲ್ಲಿ ಮೂವರಿಗೆ ಮಾತ್ರ ವಿದ್ಯೆ ಕೂಡಿಬಂದಿತು. ನಾಲ್ಕನೆಯುವನಿಗೆ ಲೌಕಿಕಜ್ಞಾನ ಹೊರತು ಶಾಸ್ತ್ರಜ್ಞಾನ ಉಂಟಾಗಲಿಲ್ಲ.

ಕೊಂಚಕಾಲ ಕಳೆದ ತರುವಾಯ ಸಕಲ ವಿದ್ಯಾ ಪಾರಂಗತರಾದ ಮೂವರು ತರುಣ ಮಿತ್ರರು ದೇಶಾಟನೆ ಮಾಡಲು ನಿಶ್ಚಯಿಸಿದರು. ನಾನಾ ದೇಶಗಳ ಅರಸರನ್ನು ಕಂಡು ತಮ್ಮ ವಿದ್ಯಾನೈಪುಣ್ಯತೆಯನ್ನು ಪ್ರದರ್ಶಿಸಿ, ಧನ ಸಂಪಾದಿಸಬೇಕೆಂಬುದು ಅವರ ಹಂಚಿಕೆಯಾಗಿತ್ತು. ಅವರೊಂದಿಗೆ ನಾಲ್ಕನೆಯವನೂ ಹೊರಟ. ಕೊಂಚದೂರ ಹೋದ ನಂತರ ನಾಲ್ಕನೆಯವನು ತಮ್ಮೊಂದಿಗೆ ಬರುವುದು ಉಳಿದ ಮೂವರಿಗೆ ಸರಿಬೀಳಲಿಲ್ಲ. ಒಂದು ವಿದ್ಯೆಯಾಗಲೀ, ಅಥವಾ ಶಾಸ್ತ್ರವಾಗಲೀ ಅರಿಯದ ಇವನು ಏಕೆ ನಮ್ಮ ಬೆನ್ನುಬೀಳಬೇಕೆಂದು ಅವರು ಯೋಚಿಸಿದರು.

"ಲೋ ಗೆಳೆಯಾ, ನೀನು ಹಿಂತಿರುಗಿ ಹೋಗುವುದು ಉಚಿತ. ನಿನ್ನಂತೆ ವಿದ್ಯೆಯ ಜ್ಞಾನವಿಲ್ಲದವನು ಈ ಪ್ರಪಂಚದಲ್ಲಿ ಯಾರೂ ಇರಲಾರರು. ಆದುದರಿಂದ ನಿನಗೆ ರಾಜಾಶ್ರಯ ದೊರಕುವುದು ಅಸಂಭವ." ಹೊರಟುಹೋಗು ಎಂದರವರು.

ಅದಕ್ಕೆ ನಾಲ್ಕನೇಯವನು ಕುಪಿತನಾಗದೆ ಹೀಗೆ ಅವರನ್ನು ಪುಸಲಾವಣೆ ಮಾಡಿದ: 'ದಯವಿಟ್ಟು ನಿಮ್ಮೊಂದಿಗೆ ಬರಲುಬಿಡಿ. ನನಗೆ ರಾಜಾಶ್ರಯ ಸಿಕ್ಕದಿದ್ದರೇನು? ನನ್ನ ಮಿತ್ರರಿಗೆ ಸನ್ಮಾನಗಳು ದೊರೆಯುವುದನ್ನಾದರೂ ನೋಡಿ ಸಂತೋಷಪಡುತ್ತೇನೆ" ಎಂದ.

ಉಳಿದ ಮೂವರು ಮಿತ್ರರಿಗೆ ಅವನು ತಮ್ಮನ್ನು ಬಿಟ್ಟುಹೋಗುವ ಘಟವಲ್ಲವೆಂದು ಖಚಿತವಾಯಿತು. ಸ್ವಲ್ಪ ಸಮಯವಾದ ಮೇಲೆ ಅವರೆಲ್ಲರೂ ಒಂದು ಅರಣ್ಯವನ್ನು

ಗುರುರಾಜಾಚಾರಿ

ಪ್ರವೇಶಿಸಿದರು. ಅಲ್ಲಿ ಅವರಿಗೊಂದು ಸಿಂಹದ ಅಸ್ತಿಪಂಜರ ಕಾಣಿಸಿತು. ಅದನ್ನು ಕಂಡ ಕೂಡಲೇ ಸಕಲವಿದ್ಯಾಪಾರಂಗತರಲ್ಲೊಬ್ಬನು ತಟ್ಟನೆ ನಿಂತು "ಇದೋ ಈ ಸಿಂಹದ ಅಸ್ತಿ ಪಂಜರವನ್ನು ಜೋಡಿಸುವೆನು" ಎಂದ.

ಅದೇರೀತಿ ಆತನು ಎಲುಬುಗಳನ್ನೆಲ್ಲಾ ಒಂದು ಕಡೆಯಿಂದ ಜೋಡಿಸಿದ. ಆಗ ಎರಡನೆಯವನು "ಹಾಗಾದರೆ ನಾನು ಅದಕ್ಕೆ ನನ್ನ ಮಂತ್ರಶಕ್ತಿಯಿಂದ ಮಾಂಸ, ರಕ್ತಗಳನ್ನು ಕೊಡುವೆನು" ಎಂದು ಹೇಳಿ, ಮಂತ್ರ ಹೇಳುತ್ತಾ ಆ ಅಸ್ತಿಪಂಜರದಲ್ಲಿ ಮಾಂಸ ಮತ್ತು ರಕ್ತಗಳನ್ನು ತುಂಬಿದ.

ಆಗ ಮೂರನೆಯವನು ಮುಂದೆಬಂದು, "ಸರಿ, ನೀವಿನ್ನು ಒಂದುಪಕ್ಕಕ್ಕೆ ಸರಿಯಿರಿ. ನಾನು ಈ ಸಿಂಹಕ್ಕೆ ಪ್ರಾಣವನ್ನು ತುಂಬುತ್ತೇನೆ" ಎಂದ ಠೀವಿಯಿಂದ.

ಆತನ ಮಾತುಗಳನ್ನು ಕೇಳಿ ನಾಲ್ಕನೆಯವನು ಭಯದಿಂದ ಕಂಪಿಸಿದ. ಅವನು ಮೂರನೆಯವನ ಕೈಕಾಲುಗಳನ್ನು ಹಿಡಿದುಕೊಂಡು "ಎಲೈ ಮಿತ್ರನೇ, ಸಿಂಹ ಕ್ರೂರಜಂತುವೆಂಬ ವಿಷಯ ನಿನಗೆ ತಿಳಿದಿದೆ. ಅದಕ್ಕೆ ಪ್ರಾಣ ತುಂಬುವುದು ಬಹಳ ಪ್ರಮಾದಕರ ಪ್ರಯತ್ನ. ಬೇಡಬೇಡ" ಎಂದ.

ಮೂರನೆಯವನಿಗೆ ಈ ಮಾತುಗಳು ರುಚಿಸಲಿಲ್ಲ. "ನಾನು ಕಲಿತಿರುವ ವಿದ್ಯೆಯನ್ನು ಸಮಯ ಬಂದಾಗ ಉಪಯೋಗ ಮಾಡದಂತಿರಲು ಅಡ್ಡಿಮಾಡುವೆಯಾ? ನಾನು ಕಷ್ಟಪಟ್ಟು ಕಲಿತುದಾದರೂ ಏಕೆ ಆ ವಿದ್ಯೆಯನ್ನು" ಎಂದು ನಾಲ್ಕನೆಯವನ ಮಾತನ್ನು ತಿರಸ್ಕಾರ ಮಾಡಿಬಿಟ್ಟ.

"ಸರಿ, ನಿಮ್ಮ ಇಷ್ಟ. ನಾನು ಮಾತ್ರ ಮೊದಲು ಮರವೇರಿ ಕುಳಿತುಕೊಳ್ಳುವೆನು. ಆಮೇಲೆ ನಿಮಗಿಷ್ಟಬಂದಂತೆ ಮಾಡಿಕೊಳ್ಳಿ" ಎಂದು ಹೇಳಿ ನಾಲ್ಕನೆಯವನು ಹತ್ತಿರದಲ್ಲಿದ್ದ ಒಂದು ಮರವನ್ನೇರಿ ಕುಳಿತುಕೊಂಡ.

ಮೂರನೆಯವನು ಅಟ್ಟಹಾಸದಿಂದ ಆ ಸಿಂಹಕ್ಕೆ ತನ್ನ ಮಂತ್ರಶಕ್ತಿಯ ಪ್ರಭಾವದಿಂದ ಪ್ರಾಣತುಂಬಿದ. ಕೂಡಲೇ ಅದು ಭಯಂಕರವಾಗಿ ಗರ್ಜಿಸುತ್ತಾ ಆ ಮೂವರು ಮಿತ್ರರಮೇಲೆ ಬಿದ್ದು ಕೊಂದುಹಾಕಿತು.





# ಐದು ರೊಟ್ಟಿಗಳು

ಒಂದುದಿನ ಸೋಮಯ್ಯ, ರಾಮಯ್ಯ ಎಂಬುವರು ದೂರಪ್ರಯಾಣ ಮಾಡುತ್ತಾ ಒಂದು ಅಡಗೂಲಜ್ಜಿಯ ಮನೆಯಲ್ಲಿ ತಂಗಿದರು. ಮರುದಿನ ಅವರು ಮುಂಜಾನೆ ತಮ್ಮ ಪ್ರಯಾಣವನ್ನು ಮುಂದುವರಿಸಲು ಸಿದ್ಧರಾಗುತ್ತಿರುವಾಗ ಅಜ್ಜಿ ಅವರಿಗೆ ತಲಾ ಒಂದೊಂದು ಗಂಟು ಕೊಟ್ಟಳು. ಸೋಮಯ್ಯ ಉದಾರ ಹೃದಯಿ. ರಾಮಯ್ಯ ಜಿಪುಣಾಗ್ರೇಸರ ಚಕ್ರವರ್ತಿ. ಆದುದರಿಂದ ಅಜ್ಜಿ ಸೋಮಯ್ಯನಿಗೆ ಕೊಟ್ಟ ಗಂಟಿನಲ್ಲಿ ಮೂರು ರೊಟ್ಟಿಗಳನ್ನೂ ರಾಮಯ್ಯನಿಗೆ ಕೊಟ್ಟ ಗಂಟಿನಲ್ಲಿ ಎರಡು ರೊಟ್ಟಿಗಳನ್ನೂ ಇಟ್ಟಿದ್ದಳು.

ಸ್ವಲ್ಪದೂರದ ವರೆವಿಗೂ ಅವರ ಹಾದಿ ಒಂದೇ ಆದುದರಿಂದ ಅವರಿಬ್ಬರೂ ಒಟ್ಟಾಗಿ ಹೊರಟರು. ಮಟಮಟ ಮಧ್ಯಾಹ್ನದವೇಳೆ. ಅವರು ಒಂದು ಹೊಳೆಯದಂಡೆಯಮೇಲಿದ್ದ ಮರದಕೆಳಗೆ ಕುಳಿತುಕೊಂಡರು. ಹೊಳೆಯಲ್ಲಿ ಕೈ, ಕಾಲುಗಳನ್ನು ತೊಳೆದುಕೊಂಡು, ತಮ್ಮ ತಮ್ಮ ಗಂಟುಗಳನ್ನು ಬಿಚ್ಚಿದರು.

"ನೋಡಿದಿರಾ ಸೋಮಯ್ಯ, ಆ ಅಜ್ಜಿಯ ಪಕ್ಷಪಾತ. ನನ್ನ ಮೂಟೆಯಲ್ಲಿ ಎರಡೇ ಎರಡು ರೊಟ್ಟಿಯನ್ನಿಟ್ಟಿದ್ದಾಳೆ" ಎಂದ ರಾಮಯ್ಯ. ಸೋಮಯ್ಯ ನಸುನಕ್ಕು "ಚಿಂತಿಸಬೇಡಿ. ಬೇಕಾದರೆ ಈ ಐದು ರೊಟ್ಟಿಗಳನ್ನು ಸಮಭಾಗವಾಗಿ ಹಂಚಿಕೊಂಡು ಊಟಮಾಡೋಣ" ಎಂದ. ಅವರು ಊಟಕ್ಕೆ ಕುಳಿತುಕೊಂಡ ಸಮಯಕ್ಕೆ ಸರಿಯಾಗಿ ಅವರಸಮೀಪಕ್ಕೆ ಕಾಮಯ್ಯನೆಂಬ ಮತ್ತೊಬ್ಬ ಪ್ರಯಾಣಿಕ ಬಂದ. "ಅಣ್ಣಾಗಳಿರಾ, ಹಸಿವು ಸುಡುತ್ತಿದೆ. ಬಹಳದೂರ ನಡೆದು ದಣಿದಿರುವೆನು. ನಿಮ್ಮ ಆಹಾರದಲ್ಲಿ ನನಗೂ ಒಂದಿಷ್ಟು ಕೊಟ್ಟರೆ ಕೃತಜ್ಞನಾಗಿರುತ್ತೇನೆ" ಎಂದು ದೈನ್ಯದಿಂದ ಆರ್ತನಾಗಿ ಕೇಳಿದ ಕಾಮಯ್ಯ.

"ನೀವೂ ನಮ್ಮೊಂದಿಗೆ ಉಣ್ಣುವಿರಂತೆ ಬನ್ನಿ, ನಮ್ಮ ಬಳಿಯಿರುವ ರೊಟ್ಟಿ ಮೂವರಿಗೆ ಸಾಕಾಗುತ್ತದೆ" ಎಂದು ಸೋಮಯ್ಯ ಹೇಳಿದ. ಬಳಿಕ ಇದ್ದ ರೊಟ್ಟಿಗಳನ್ನು

ಎನ್. ಗೋಪಾಲರಾವ್

ಮೂವರೂ ಹಂಚಿಕೊಂಡು ತಿಂದರು. ಹೊಳೆ ನೀರು ಕುಡಿದರು. ಕಾಮಯ್ಯ ಇಬ್ಬರಿಗೂ ತನ್ನ ಕೃತಜ್ಞತೆಯನ್ನು ಸೂಚಿಸಿ ಸೋಮಯ್ಯನ ಕೈಗೆ ಸ್ವಲ್ಪ ಹಣ ನೀಡಿದ. ಅವನು ಬೇಡೆಂದರೂ ಕಿವಿಗೆ ಹಾಕಿಕೊಳ್ಳದೆ ಆತನ ಕೈಯಲ್ಲಿ ಐದಾಣೆಗಳನ್ನು ಇಟ್ಟು ಕಾಮಯ್ಯ ತನ್ನದಾರಿ ತಾನು ಹಿಡಿದ.

ಸೋಮಯ್ಯ ಸ್ವಲ್ಪಹೊತ್ತು ಆಲೋಚಿಸಿ ತನಗೆ ಕಾಮಯ್ಯನು ಕೊಟ್ಟ ಐದಾಣೆಗಳಲ್ಲಿ ಎರಡನ್ನು ರಾಮಯ್ಯನಿಗೆ ಕೊಡುತ್ತಾ, "ನಿಮ್ಮಪಾಲು ನೀವು ತೆಗೆದುಕೊಳ್ಳಿ. ನನ್ನ ಹತ್ತಿರ ಮೂರು ರೊಟ್ಟಿಗಳಿದ್ದವು. ನಿಮ್ಮ ಹತ್ತಿರವಿದ್ದುದು ಎರಡೇ. ಕಾಮಯ್ಯ ಐದಾಣೆ ಕೊಟ್ಟದ್ದಾನೆ. ಅವರಲ್ಲಿ ಎರಡಾಣೆ ನಿಮಗೆ ಸಲ್ಲುವುದು ಉಚಿತ" ಎಂದ.

"ನೋಡ್ರಿ, ಇದು ಬಹಳ ಅನ್ಯಾಯ. ಕಾಮಯ್ಯನಿಗೆ ನಾವು ರೊಟ್ಟಿಗಳನ್ನು ಮಾರಲಿಲ್ಲ. ನಾವಾತನನ್ನು ಹಣ ಕೊಡುವಂತೆಯೂ ಕೇಳಲಿಲ್ಲ. ಆತನೇ ಕೃತಜ್ಞತಾಪೂರ್ವಕವಾಗಿ ನಮ್ಮಿಬ್ಬರಿಗೆಂದು ಐದಾಣೆ ಕೊಟ್ಟಿರುವನು. ಆದುದರಿಂದ ಅದು ನಮ್ಮಿಬ್ಬರಿಗೂ ಸಮಭಾಗವಾಗಿ ಸಲ್ಲಬೇಕು. ನನಗೆ ಉಳಿದ ಅರ್ಧಾಣೆಯನ್ನು ದಯವಿಟ್ಟು ಕೊಡಿ" ಎಂದ ರಾಮಯ್ಯ. ಸೋಮಯ್ಯನಿಗೆ ಅರ್ಧಾಣೆ ಕೊಡಲು ಅಭ್ಯಂತರವಿಲ್ಲದಿದ್ದರೂ ರಾಮಯ್ಯನ ಮಾತಿನ ಧೋರಣೆ ಹಿಡಿಸಲಿಲ್ಲ. ಅವನಿಗೆ ಕೋಪ ಬಂತು. "ನಡೆಯಿರಿ, ನ್ಯಾಯಾಧಿ




ಕಾರಿಯ ಬಳಿಗೆ ಹೋಗಿ ನ್ಯಾಯವನ್ನು ಕೇಳೋಣ" ಎಂದು ಹೇಳಿದ ಸೋಮಯ್ಯ.

ಸರಿ, ಇಬ್ಬರೂ ಆ ಗ್ರಾಮದ ನ್ಯಾಯಾಧಿಕಾರಿಗೆ ನಡೆದುದನ್ನೆಲ್ಲಾ ವಿವರಿಸಿ ಹೇಳಿ, ತೀರ್ಪು ಕೊಡುವಂತೆ ಬೇಡಿದರು. ನ್ಯಾಯಾಧಿಕಾರಿ ಇಬ್ಬರ ವಾದಗಳನ್ನೂ ಶ್ರದ್ಧೆಯಿಂದ ಕೇಳಿ, ರಾಮಯ್ಯನಕಡೆ ತಿರುಗಿ "ನ್ಯಾಯವಾಗಿ ನುಡಿಯಬೇಕೆಂದರೆ ಕಾಮಯ್ಯ ಕೊಟ್ಟ ಐದಾಣೆಗಳಲ್ಲಿ ಸೋಮಯ್ಯನ ಪಾಲು ನಾಲ್ಕಾಣೆ, ನಿನ್ನ ಭಾಗ ಒಂದಾಣೆ. ಆದುದರಿಂದ ನೀನು ಸೋಮಯ್ಯನಿಗೆ ಒಂದಾಣೆಯನ್ನು ಹಿಂತಿರುಗಿಸು" ಎಂದ.

ಈ ತೀರ್ಮಾನವನ್ನು ಕೇಳಿ ರಾಮಯ್ಯ ಚಕಿತನಾದ. ಸೋಮಯ್ಯನ ಹತ್ತಿರದಿಂದ

ಅರ್ಧಾಣೆ ಹೆಚ್ಚಾಗಿ ಕೊಡಿಸುವನೆಂದು ನೆನೆ ಸಿದ್ದರೆ, ತನ್ನನ್ನೇ ಒಂದಾಣೆ ಹಿಂತಿರುಗಿಸು ವಂತೆ ಹೇಳುತ್ತಿದ್ದಾನಲ್ಲಾ ಈ ನ್ಯಾಯಾಧಿ ಕಾರಿ! "ಅಯ್ಯೋ, ಇದೆಂತಹ ನ್ಯಾಯ? ನಮ್ಮ ಲ್ಲಿದ್ದ ರೊಟ್ಟಿಗಳ ಸಂಖ್ಯೆಯ ಪ್ರಕಾರ ನೋಡಿ ದರೂ ಸಹ ನನಗೆ ಎರಡಾಣೆ ಸಲ್ಲಬೇಕಲ್ಲ?" ಎಂದು ನ್ಯಾಯಾಧಿಕಾರಿಯನ್ನು ಕೇಳಿದ ಕೃಪಣಾಗ್ರೇಸರನಾದ ರಾಮಯ್ಯ.

"ಹೌದು, ನಾನು ಹೇಳಿದುದೇ ಸರಿ. ಅದು ಹೇಗೆ ನ್ಯಾಯವೋ ವಿವರಿಸುವೆನು. ಅಲ್ಲ, ಐದು ರೊಟ್ಟಿಗಳನ್ನು ನೀವು ಮೂವರೂ ಹೇಗೆ ಹಂಚಿಕೊಂಡಿರಿ?" ಎಂದು ಕೇಳಿದ ನ್ಯಾಯಾಧಿ ಕಾರಿ. "ಪ್ರತಿ ರೊಟ್ಟಿಯನ್ನೂ ಮೂರು ಮೂರು ಭಾಗಗಳಾಗಿ ಮಾಡಿದೆವು. ಒಟ್ಟು ಹದಿನೈದು ಭಾಗಗಳನ್ನು ಮೂವರೂ ಸರಿ ಸಮಾನವಾಗಿ ಹಂಚಿಕೊಂಡೆವು" ಎಂದು ವಿವರಿಸಿದ ರಾಮಯ್ಯ.

"ನಿನ್ನ ರೊಟ್ಟಿಗಳನ್ನು ಭಾಗಗಳಾಗಿ ವಿಂಗಡಿಸಿದಾಗ ಎಷ್ಟು ಚೂರುಗಳಾದವು?" ಎಂದು ಗಂಭೀರವಾಗಿ ಕೇಳಿದ ನ್ಯಾಯಾಧಿ ಕಾರಿ. "ಆರು" ಎಂದು ರಾಮಯ್ಯನೆಂದ. "ಆರು ಚೂರುಗಳಲ್ಲಿ ನೀನೇ ಐದು ಚೂರುಗಳನ್ನು ತಿಂದೆ. ಒಂದು ಚೂರನ್ನು ಮಾತ್ರ ಕಾಮಯ್ಯನಿಗೆಕೊಟ್ಟೆ ಎಂದಾಯಿತು. ಸೋಮಯ್ಯ ತಂದ ಮೂರು ರೊಟ್ಟಿಗಳಿಂದ ಒಂಬತ್ತು ಚೂರುಗಳಾದವು. ಅದರಲ್ಲಿ ಆತನು ಐದು ಮಾತ್ರ ತಿಂದು ಉಳಿದ ನಾಲ್ಕನ್ನು ಕಾಮಯ್ಯನಿಗೆಕೊಟ್ಟ. ಕಾಮಯ್ಯ ತಾನುತಿಂದ ಐದು ಚೂರುಗಳಿಗೆ ಐದಾಣೆ ಪ್ರತಿಫಲಕೊಟ್ಟ. ಅದರಲ್ಲಿ ಒಂದು ಚೂರು ಮಾತ್ರ ನಿನ್ನದು. ನಾಲ್ಕು ಚೂರುಗಳು ಸೋಮಯ್ಯನದು. ಕಾಮಯ್ಯ ಕೊಟ್ಟ ಐದಾಣೆಗಳಲ್ಲಿ ಸೋಮಯ್ಯನಿಗೆ ನಾಲ್ಕು ಆಣೆ ಸಲ್ಲಬೇಕು. ಒಂದಾಣೆ ಮಾತ್ರ ನಿನಗೆ ಸಂದಾಯ ವಾಗಬೇಕಾದುದು ನ್ಯಾಯ" ಎಂದು ನ್ಯಾಯಾಧಿಕಾರಿ ವಿವರಿಸಿ ಹೇಳಿದ.

ಸೋಮಯ್ಯ ತನಗೆಕೊಟ್ಟ ಎರಡಾಣೆ ಗಳಲ್ಲಿ ಒಂದಾಣೆಯನ್ನು ಹಿಂತಿರುಗಿಸಿ, ತನ್ನ ದುರದೃಷ್ಟವನ್ನು ನಿಂದಿಸಿಕೊಳುತ್ತಾ ರಾಮಯ್ಯ ತನ್ನ ದಾರಿಹಿಡಿದ.






# ಅಪವಾದ

ಸಾವಿರಾರು ವರ್ಷಗಳ ಹಿಂದೆ ಧನವಂತನಾದ ವೈಶ್ಯನೊಬ್ಬನಿದ್ದನು. ಆತನಿಗೆ ಸುಬುದ್ಧಿ ಎಂಬ ಮಗನೂ, ಸುಮಿತ್ರ ಎಂಬ ಮಗಳೂ ಇದ್ದರು. ತನ್ನ ಅವಸಾನಕಾಲವು ಸಮೀಪಿಸಿತೆಂದು ತಿಳಿದು ಆ ವೈಶ್ಯನು ತನ್ನ ಮಗನನ್ನು ಹತ್ತಿರಕ್ಕೆ ಕರೆದು "ಮಗೂ, ನನ್ನ ಅನಂತರ ನಮ್ಮ ವ್ಯಾಪಾರವನ್ನು ಜಾಗರೂಕತೆಯಿಂದ ಮುಂದುವರಿಸಿಕೊಂಡು ಹೋಗು. ನೀನೂ ತಂಗಿಯೂ ಅನ್ಯೋನ್ಯವಾಗಿರಿ. ಇದೇ ನನ್ನ ಅಂತಿಮ ಕೋರಿಕೆ" ಎಂದು ನುಡಿದ.

ತಂದೆ ತೀರಿಹೋದ ಕೆಲವು ದಿನಗಳನಂತರ ಸುಬುದ್ಧಿ ಮೂರು ಜಹಜುಗಳಲ್ಲಿ ಸರಕುಗಳನ್ನು ಹೇರಿಕೊಂಡು ದೇಶಾಂತರಕ್ಕೆ ಹೊರಟ. ಹೋಗುವ ಮುನ್ನ ತನ್ನ ತಂಗಿಯೊಂದಿಗೆ "ತಂಗೀ, ನಾನು ಹಿಂತಿರುಗಿ ಬರಲು ಬಹಳ ದಿನಗಳಾಗಬಹುದು. ನಾನಿಲ್ಲದ ಸಮಯದಲ್ಲಿ ನೀನು ನಿನ್ನ ಧರ್ಮವನ್ನು ಅತಿಕ್ರಮಿಸಬೇಡ. ಪರರೊಂದಿಗೆ ಪ್ರಸಂಗಿಸಬೇಡ" ಎಂದು ಹೇಳಿದ. ಮತ್ತೆ ಎಂದು ಹಿಟ್ಟುಗೂಡುವೆವೋ ಎಂದು ತನ್ನ ತಸಬೀರನ್ನು ತಂಗಿಗೆ ಕೊಟ್ಟು ಆಕೆಯ ಚಿತ್ರವೊಂದನ್ನು ತನ್ನೊಂದಿಗೆ ತೆಗೆದುಕೊಂಡು ಸಮುದ್ರಪ್ರಯಾಣ ಮಾಡಿದ.

ಎರಡು ವರ್ಷಗಳು ಕಳೆದವು. ಮೂರನೇ ವರ್ಷ ನಡೆಯುತಿತ್ತು. ಸುಬುದ್ಧಿಯ ಜಹಜುಗಳು ಒಂದು ರೇವುಪಟ್ಟಣವನ್ನು ತಲುಪಿದುವು. ಅಲ್ಲಿ ಲಂಗರು ಹಾಕಿ, ಒಂದು ಬಟ್ಟಲು ತುಂಬ ರತ್ನಗಳನ್ನೂ, ಅಮೂಲ್ಯವಾದ ರತ್ನಗಂಬಳಿಗಳನ್ನೂ ತೆಗೆದುಕೊಂಡು ಆ ದೇಶದ ರಾಜನಾದ ಸುದರ್ಶನನನ್ನು ಸಂದರ್ಶಿಸಲು ಹೋದ. ತಾನು ತಂದಿದ್ದ ಕಾಣಿಕೆಗಳನ್ನು ಸುದರ್ಶನನಿಗೆ ಸಮರ್ಪಿಸಿ "ತಮ್ಮ ದೇಶದಲ್ಲಿ ವ್ಯಾಪಾರ ಮಾಡಲು ನಮಗೆ ಅನುಮತಿ ಕೊಡಬೇಕು" ಎಂದು ವಿನಯಪೂರ್ವಕವಾಗಿ ಕೇಳಿಕೊಂಡ.

ಸುಬುದ್ಧಿ ತಂದುಕೊಟ್ಟ ಕಾಣಿಕೆಗಳನ್ನು ನೋಡಿ ಸುದರ್ಶನರಾಜನು ತುಂಬಾ ಸಂತೋಷ ಹೊಂದಿದ. ಆತನಿಗೆ ಇದುವರೆವಿಗೂ ಯಾವ ವ್ಯಾಪಾರಿಯೂ ಅಷ್ಟೊಂದು

ಜಿ. ಸುಬ್ಬಸೆಟ್ಟಿ





ಬೆಲೆಬಾಳುವ ಬಹುಮಾನಗಳನ್ನು ಕಾಣಿಕೆ ಯಾಗಿ ಒಪ್ಪಿಸಿರಲಿಲ್ಲ. ಅದರಿಂದ ಸುದರ್ಶನನು ಸುಬುದ್ಧಿಯ ಕೋರಿಕೆಯಂತೆ ವ್ಯಾಪಾರ ಮಾಡಲು ಅನುಮತಿ ನೀಡಿದುದು ಮಾತ್ರವಷ್ಟೇ ಅಲ್ಲದೆ ಆತನ ಜಹಜಿನಲ್ಲಿರುವ ಸಾಮಾನುಗಳನ್ನು ನೋಡಲು ಪರಿವಾರ ದೊಂದಿಗೆ ರೇವಿಗೆಬಂದನು.

ಜಹಜಿನಲ್ಲಿರುವ ವಿವಿಧ ಸಾಮಾನು ಗಳನ್ನು ನೋಡಿ ಆನಂದಿಸುತ್ತಿದ್ದ ಸುದರ್ಶನ ರಾಜನ ಕಣ್ಣು ಒಂದುಕಡೆ ತಗುಲಿ ಹಾಕಿದ್ದ ಸುಮಿತ್ರಳ ತಸಬೀರಿನಮೇಲೆ ಬಿತ್ತು.

"ಯಾರೀಸುಂದರಿ?" ಎಂದು ಸುದರ್ಶನನು ಸುಬುದ್ಧಿಯನ್ನು ಕೇಳಿದ. ಸುಬುದ್ಧಿ ಅತ್ಯಂತ ವಿನಯದಿಂದ "ಪ್ರಭೂ, ಆಕೆ ನನ್ನ ತಂಗಿ" ಎಂದ. ರಾಜನು ತಲೆದೂಗುತ್ತಾ, "ಈ ಹುಡುಗಿ ಸೌಂದರ್ಯಕ್ಕೆ ತಕ್ಕಂತೆ ಶೀಲವತಿಯೂಹೌದೆ?" ಎಂದು ಮತ್ತೆ ಕೇಳಿದ.

"ಆಕೆ ದುಶ್ಶೀಲೆಯೆಂದು ಯಾರೂ ಹೇಳಲಾರರು" ಎಂದ ಸುಬುದ್ಧಿ.

"ಹಾಗಾದ ಪಕ್ಷಕ್ಕೆ ನಾನಾಕೆಯನ್ನು ಪಟ್ಟದರಸಿಯನ್ನಾಗಿ ಮಾಡಿಕೊಳ್ಳುವೆನು" ಎಂದ ಸುದರ್ಶನ.

ಇದೆಲ್ಲವನ್ನೂ ಕೇಳುತ್ತಿದ್ದ ಸೇನಾನಿಗೆ ಅಸೂಯೆಯುಂಟಾಯಿತು.

"ಅಲ್ಲ, ಈ ವೈಶ್ಯಾಂಗನೆ ನಮ್ಮ ಅರಸಿಯಾಗುವುದೆಂದರೇನು? ನಮ್ಮ ಸತಿಯರು ಈಕೆಗೆ ಸೇವೆಸಲ್ಲಿಸುವುದೆಂದರೇನು? ಉಹುಂ" ಎಂದುಕೊಂಡ ಸೇನಾನಿ ಮನಸ್ಸಿನಲ್ಲೇ. ಆತನು ನಿಧಾನವಾಗಿ ರಾಜನೊಂದಿಗೆ,

"ಮಹಾಪ್ರಭೂ, ಆ ಸ್ತ್ರೀಯನ್ನು ನಾನು ಬಲ್ಲೆ. ಆಕೆ ಕೆಟ್ಟನಡತೆಯುಳ್ಳವಳು" ಎಂದ.

ಈ ಮಾತು ಕೇಳಿ ಸುದರ್ಶನನಿಗೆ ಸುಬುದ್ಧಿಯ ಮೇಲೆ ತುಂಬಾ ಆಗ್ರಹ ವುಂಟಾಯಿತು. "ದುಶ್ಚರಿತ್ರಳನ್ನು ಶೀಲವತಿ ಎಂದು ಯಾಕೆ ಸುಳ್ಳಾಡಿದೆ? ನಿನ್ನ ತಲೆ ತೆಗೆಯಿಸುವೆನು" ಎಂದ.

"ಮಹಾಪ್ರಭೂ, ನಿಮ್ಮ ಸೇನಾಧಿಪತಿ ಹೇಳಿದ ಮಾತು ಸರ್ವಥಾ ಸುಳ್ಳು. ತನ್ನ ಮಾತುಗಳನ್ನು ರುಜುಮಾಡುವಂತೆ ಆತನಿಗೆ ಆಜ್ಞೆಮಾಡಿ. ನನ್ನ ತಂಗಿಯ ಪರಿಚಯವಿದೆ ಎಂದನಲ್ಲವೆ? ಆಕೆಯ ಉಂಗರವನ್ನು ತರಲಿ.

ಮತ್ತು ಆಕೆಗೆ ಹುಟ್ಟುಮಚ್ಚೆ ಎಲ್ಲಿರುವುದೋ ತಿಳಿಸಲಿ'' ಎಂದ ಸುಬುದ್ಧಿ.

ಸುದರ್ಶನನಿಗೆ ಇದು ನ್ಯಾಯವಾಗಿಯೇ ತೋರಿತು. ಆತನು ಸೇನಾಧಿಪತಿಯನ್ನು ಕುರಿತು "ಎರಡು ಮಾಸಗಳಲ್ಲಿ ನೀನು ಆ ಸ್ತ್ರೀಯ ಉಂಗುರವನ್ನೂ, ಹುಟ್ಟುಮಚ್ಚೆಯ ರಹಸ್ಯವನ್ನೂ ತಿಳಿಸದಿದ್ದರೆ ನಿನಗೆ ಮರಣ ದಂಡನೆ ವಿಧಿಸುವೆನು'' ಎಂದ.

ಸೇನಾಧಿಪತಿ ಕೂಡಲೇ ಸುಮಿತ್ರಳಿದ್ದ ದೇಶಕ್ಕೆ ಪ್ರಯಾಣ ಬೆಳೆಸಿದ. ಆ ದೇಶವನ್ನು ಸೇರಿಕೊಂಡ ಕೂಡಲೇ ಒಬ್ಬ ಅಡಗೂಲಜ್ಜಿಯ ಮನೆಗೆ ಹೋಗಿ ತನ್ನ ಕೆಲಸವನ್ನು ತಿಳಿಸಿ "ಅಜ್ಜೀ, ನನಗೆ ಆ ಹುಡುಗಿಯ ಉಂಗರವನ್ನು ತಂದುಕೊಟ್ಟು, ಹುಟ್ಟುಮಚ್ಚೆಯ ರಹಸ್ಯವನ್ನು ತಿಳಿಸಿದರೆ ನಿನಗೆ ಯಥೇಚ್ಛವಾಗಿ ಹಣ ಕೊಡುವೆನು'' ಎಂದು ಆಶೆ ಹುಟ್ಟಿಸಿದ. ಅಜ್ಜಿ ಹಣದಾಶೆಯಿಂದ ಸುಮಿತ್ರಳ ಮನೆಗೆ ಹೋಗಿ ಲೋಕಾಭಿರಾಮವಾಗಿ ಮಾತನಾಡುತ್ತಾ ಆಕೆಯ ಬೆನ್ನಿನ ಮೇಲೆ ಒಂದು ಹುಟ್ಟುಮಚ್ಚೆಯಿರುವುದನ್ನು ತಿಳಿದುಕೊಂಡಳು. ಆಕೆಯ ಉಂಗರವನ್ನೂ ಸಹ ರಹಸ್ಯವಾಗಿ ಅಪಹರಿಸಿ ತಂದು ಸೇನಾನಿಗೆ ಕೊಟ್ಟಳು.

ಸೇನಾನಿ ಸ್ವಲ್ಪವಾದರೂ ವಿಲಂಬಮಾಡದೆ ಸ್ವದೇಶಕ್ಕೆ ಹಿಂತಿರುಗಿ, ಸುದರ್ಶನನಿಗೆ ಉಂಗರ ಮತ್ತು ಮಚ್ಚೆಯ ರಹಸ್ಯವನ್ನು ತಿಳಿಸಿದ. ತಾನು ಸುಮಿತ್ರಳಮೇಲೆ ಹೊರಿಸಿದ ಅಪವಾದವನ್ನು ಸೇನಾನಿ ರುಜುವಾತು ಮಾಡಿದುದರಿಂದ ಸುದರ್ಶನನು ಸುಬುದ್ಧಿಗೆ ಮರಣದಂಡನೆ ವಿಧಿಸಿದ.



ಆದರೆ ಸುಬುದ್ಧಿ ರಾಜನಲ್ಲಿ ಒಂದು ಮನವಿ ಮಾಡಿಕೊಂಡ: "ನಾನು ಈ ಪರದೇಶದಲ್ಲಿ ಮರಣ ಹೊಂದುವ ಮುನ್ನ ಒಂದು ಸಾರಿ ನನ್ನ ತಂಗಿಯನ್ನು ನೋಡಬೇಕೆಂಬ ಅಭಿಲಾಷೆಯಿದೆ. ಆಕೆಯನ್ನು ಕರೆಕಳುಹಿಸಿ ಒಂದುಸಾರಿ ಭೇಟಿಮಾಡಲು ಅವಕಾಶ ಕಲ್ಪಿಸಿ. ತರುವಾಯ ನಿಶ್ಚಿಂತೆಯಾಗಿ ಮರಣ ದಂಡನೆ ಅನುಭವಿಸುವೆನು''

ಈ ಕೋರಿಕೆಗೆ ರಾಜನು ಅಪ್ಪಣೆ ದಯಪಾಲಿಸಿದನು. ಸುಬುದ್ಧಿ ಒಂದು ಕಾಗದ ಬರೆದು ಸುದರ್ಶನನ ಆಳುಗಳ ಸಂಗಡ

ಸುಮಿತ್ರಳಿಗೆ ಕಳುಹಿಸಿದ. ತನ್ನ ಅಣ್ಣನ ಮಾತುಗಳಂತೆ ನಡೆಯದೆ, ಅಡಗೂಲಜ್ಜಿಯ ಸಂಗಡ ಹರಟೆಕೊಚ್ಚಿದುದರ ಫಲವಿದೆಂದು ಆಕೆಗೆ ಆಗ ಮನವರಿಕೆಯಾಯಿತು. ಸುಮಿತ್ರ ಅಣ್ಣನನ್ನು ಭೇಟಿಮಾಡಲು ಹೊರಟಳು.

ಸುದರ್ಶನನ ರಾಜ್ಯವನ್ನು ಸೇರಿದ ಕೂಡಲೆ ಆಕೆ ರಾಜನಬಳಿಗೆ ಹೋಗಿ "ಈ ಕರ್ಣ ಕುಂಡಲ ನೋಡಿ. ಇದು ತುಂಬಾ ಬೆಲೆ ಬಾಳುವಂತಹುದಲ್ಲವೇ?" ಎಂದಳು.

ಸುದರ್ಶನನು ಆಕೆ ಕೊಟ್ಟ ಆಭರಣವನ್ನು ಸೂಕ್ಷ್ಮವಾಗಿ ಪರೀಕ್ಷಿಸಿ "ಹೌದು, ಇದು ತುಂಬಾ ಅಮೂಲ್ಯವಾದುದು. ಆದರೆ ನೀವು ಇದನ್ನು ನನಗೆ ತೋರಿಸುವುದರ ರಹಸ್ಯವೇನೋ ನಾನರಿಯೆ" ಎಂದ.

"ನಿಮ್ಮ ಸೇನಾಧಿಪತಿ ಇದರಜೊತೆ ಕರ್ಣ ಕುಂಡಲವನ್ನು ನನ್ನಿಂದ ಅಪಹರಿಸಿದ್ದಾನೆ. ತಾವು ಧರ್ಮಸ್ವರೂಪಿಗಳು. ನನ್ನವಸ್ತುವನ್ನು ನನಗೆ ಹಿಂದಕ್ಕೆ ಕೊಡಿಸಿಕೊಡಿ" ಎಂದು ಪ್ರಾರ್ಥಿಸಿದಳು ಸುಮಿತ್ರ. ರಾಜನು ಕೂಡಲೇ ಸೇನಾನಿಗೆ ಹೇಳಿಕಳುಹಿಸಿದ.

ಆತನು ಬಂದ ಕೂಡಲೇ ರಾಜ ಸುಮಿತ್ರ ಮಾಡಿದ ಆರೋಪಣೆ ಹೇಳಿ "ಆಕೆಯ ಕರ್ಣ ಕುಂಡಲ ಅಪಹರಿಸಿರುವಿರಂತೆ. ಕೂಡಲೇ ಅದನ್ನು ಹಿಂತಿರುಗಿಸಿ" ಎಂದ. ಸೇನಾನಿ ಹೆದರಿ "ಪ್ರಭೂ, ಈಕೆ ಯಾರೋ ನಾನರಿಯೆ. ಅಂದಮೇಲೆ ಈಕೆಯ ವಾಲೆಯನ್ನು ಅಪಹರಿಸುವುದೆಲ್ಲಿ ಬಂತು" ಎಂದ.

ತಕ್ಷಣ ಸುಮಿತ್ರ ರಾಜನನ್ನು ಉದ್ದೇಶಿಸಿ "ಮಹಾ ಪ್ರಭೂ, ನಾನು ಸುಬುದ್ಧಿಯ ಸಹೋದರಿ ಸುಮಿತ್ರ. ನನ್ನನ್ನು ನಿಮ್ಮ ಸೇನಾಧಿಪತಿಗಳು ತಮ್ಮ ಜನ್ಮದಲ್ಲೇ ಕಂಡರಿಯೆನೆಂದು ಹೇಳಿರುವಲ್ಲಿ, ನೀವು ನನ್ನ ಅಣ್ಣನಿಗೆ ಮರಣದಂಡನೆ ಏಕೆ ವಿಧಿಸಿದಿರೋ ಅರ್ಥವಾಗುತ್ತಿಲ್ಲ" ಎಂದಳು.

ಆಗ ಸುದರ್ಶನನಿಗೆ ತನ್ನ ಸೇನಾಧಿಪತಿಯ ಮೋಸ, ಸುಮಿತ್ರಳ ಯುಕ್ತಿ ಅರ್ಥವಾಯಿತು. ಆತನು ತನ್ನ ಸೇನಾಧಿಪತಿಗೆ ಮರಣದಂಡನೆ ವಿಧಿಸಿ, ಸುಬುದ್ಧಿಯನ್ನು ಸೆರೆಯಿಂದ ಬಿಡುಗಡೆ ಮಾಡಿ, ಸುಮಿತ್ರಳನ್ನು ಬಹು ವೈಭವದಿಂದ ಮದುವೆಯಾದನು.






ಅನೇಕ ವರ್ಷಗಳ ಹಿಂದೆ ಸುರೇನಿಯಾ ಎಂಬ ದೇಶದಲ್ಲಿ ಒಬ್ಬ ನವಾಬನಿದ್ದ. ಅವನಿಗೆ ಬೇಕಾದಷ್ಟು ಆನೆಗಳೂ, ಕುದುರೆಗಳೂ, ಒಂಟೆಗಳೂ, ಸೈನ್ಯವೂ ಎಲ್ಲಾ ಇದ್ದುವು. ಧರ್ಮದೊರೆ ಎಂದು ಎಲ್ಲರಿಂದಲೂ ಹೊಗಳಿಸಿಕೊಂಡಿದ್ದ. ಸ್ವತಃ ಪರಾಕ್ರಮಶಾಲಿಯೂ ಆಗಿದ್ದ. ಆದರೆ ಅವನ ಮನಸ್ಸಿನೊಳಗೆ ಒಂದೇ ಒಂದು ಬೇಗೆ; ದೀನರನ್ನು ಕಂಡರೆ ಅವನಿಗಾಗದು.

ಅವನು ಚಿಕ್ಕಂದಿನಲ್ಲಿ ಬಹಳ ಬಡತನದಲ್ಲಿದ್ದ. ಆಗ ಅವನಿಗೆ ಸಣ್ಣದೊಂದು ಗುಡಿಸಲೂ, ತಾಯಿಯೂ ಹೊರತು ಮತ್ತೇನೂ ಇರಲಿಲ್ಲ. ಹೊಟ್ಟೆಯ ಪಾಡಿಗಾಗಿ ಆತನು ತಾಯಿಯನ್ನು ಬಿಟ್ಟು ಸೈನ್ಯದಲ್ಲಿ ಸಿಪಾಯಿಯಾಗಿ ಸೇರಿದ. ಕ್ರಮವಾಗಿ ಆತ ಸರದಾರ, ಸುಭೇದಾರ, ಸೇನಾನಾಯಕನೂ ಆಗಿ, ಕಡೆಗೆ ಆಗಿನ ನವಾಬನನ್ನೇ ಕೊಂದು ತಾನೇ ನವಾಬನಾದ. ಈಗ ಆತನಿಗೆ ಬಡವರೆಂದರೆ ಕೆಟ್ಟ ಉರಿ. ಭಿಕ್ಷುಕರು ಬಂದರೆ ಅವರನ್ನು ಕೊಂದು ಹಾಕಲು ಆಜ್ಞಾಪಿಸುತ್ತಿದ್ದ.

ಹೀಗಿರಲು ಒಂದಾನೊಂದು ದಿನ ಈ ನವಾಬನನ್ನು ನೋಡಲು ಒಬ್ಬ ಫಕೀರನು ಬಂದು ಒಳಗೆ ಸುದ್ದಿಕಳುಹಿಸಿದ.

ಸೇವಕನು ಈ ಸಮಾಚಾರವನ್ನು ಹೇಳುತ್ತಲೇ ನವಾಬನು ಅತ್ಯಂತ ಕೋಪದಿಂದ ಸಿಡಿದು ನುಡಿದ:

"ಫಕೀರನೋ, ಬಿಕ್ಕೇಗಾರನೋ! ಅವನನ್ನು ಕೊಲ್ಲದೆ ಏಕೆ ಬಿಟ್ಟಿರಿ?"

ಸೇವಕನು ವಿನಯದಿಂದ, "ಪ್ರಭುವೇ, ಅವನು ಭಿಕ್ಷೆಗಾಗಿ ಬರಲಿಲ್ಲ. ತಮ್ಮೊಡನೆ ಏನೋ ವಿಶೇಷವಾದ ವ್ಯಾಪಾರ ಮಾಡಬೇಕೆಂದು ಬಂದಿದ್ದಾನಂತೆ" ಎಂದ.

"ಹಾಗಾದರೆ ಕರೆದುಕೊಂಡು ಬಾ" ಎಂದು ನವಾಬನ ಆಜ್ಞೆಯಾಯಿತು.

ಸ್ವಲ್ಪ ಹೊತ್ತಿಗೆ ಫಕೀರ ಬಂದು ದೊರೆಗೆ ಸಲಾಂ ಮಾಡಿ ನಿಂತ. "ಏನು ಬಂದಿ?" ಎಂದು ನವಾಬ ಕೇಳಿದ.

"ಬಂದ ಕಾರ್ಯವನ್ನು ಮೊದಲೇ ಅರಿಕೆ ಮಾಡಿಕೊಂಡಿದ್ದೇನೆ" ಎಂದು ಫಕೀರನಂದ.

ಎಸ್. ಎಸ್. ರಾವ್




ನವಾಬ ತುಟಿ ಕಚ್ಚಿಕೊಂಡು "ಓಹೋ ಹಾಗಾದರೆ ನಿನ್ನ ವ್ಯಾಪಾರದ ವಸ್ತುಗಳನ್ನು ತೋರಿಸು" ಎಂದು ಆಜ್ಞೆ ಕೊಟ್ಟ.

ಫಕೀರ ನಾಲ್ಕು ಸುತ್ತೂ ನೋಡಿ "ತೋರಿಸುತ್ತೇನೆ. ಆದರೆ ಇಷ್ಟುಮಂದಿಯ ಮುಂದೆ ತೋರಿಸುವುದು ಚೆನ್ನಾಗಿಲ್ಲವಲ್ಲಾ" ಎಂದ.

ಕೂಡಲೇ ಸುತ್ತೂ ಕೂಡಿಕೊಂಡಿದ್ದ ಪರಿವಾರವೆಲ್ಲಾ ಹೊರಟು ಹೋಗಬೇಕೆಂದು ನವಾಬ ಆಜ್ಞೆಮಾಡಿದ.

ಎಲ್ಲರೂ ಹೊರಟು ಹೋದಮೇಲೆ ಫಕೀರ ತನ್ನ ನೇತಾಡುವ ಪೆಟ್ಟಿಗೆಯಿಂದ ಒಂದು ಮಾತ್ರೆಯನ್ನು ಹೊರಕ್ಕೆತೆಗೆದು, "ಹುಜೂರ್, ಈ ಮಾತ್ರೆಯನ್ನು ತಿಂದವರು ಅವರು ಯಾರೇ ಆಗಲಿ, ಪ್ರಪಂಚಕ್ಕೆಲ್ಲಾ ಒಡೆಯರಾಗುತ್ತಾರೆ" ಎಂದು ಅದರ ಮಹಿಮೆ ಹೇಳಿದ. "ಇದೇನು ಮಹಾ ವಿಶೇಷ? ನಾನು ಈಗಲೇ ಪ್ರಪಂಚಕ್ಕೆಲ್ಲಾ ಒಡೆಯನಾಗಿದ್ದೇನೆ" ಎಂದ ನವಾಬ.

ಒಡನೇ ಫಕೀರ ಪೆಟ್ಟಿಗೆಯಿಂದ ಒಂದು ಪೊಟ್ಟಣವನ್ನು ತೆಗೆದು "ಹುಜೂರ್, ಈ ಪುಡಿಯನ್ನು ತಿಂದವರಿಗೆ ಪ್ರಪಂಚದೊಳಗೆಲ್ಲಾ ಅಪೂರ್ವಳಾದ ಸುಂದರಿಯೊಂದಿಗೆ ಲಗ್ನವಾಗುತ್ತದೆ" ಎಂದ.

"ಈಗ ನನಗಿರುವ ಹೆಂಡತಿ ಪ್ರಪಂಚದೊಳಗೆಲ್ಲಾ ಅಪೂರ್ವ ಸುಂದರಿಯಾಗಿದ್ದಾಳೆ," ಎಂದ ನವಾಬ.

ಈಸಾರಿ ಫಕೀರ ಪೆಟ್ಟಿಗೆಯೊಳಗೆ ಕೈಹಾಕಿ ಒಂದು ಚಿಕ್ಕ ಕನ್ನಡಿಯನ್ನು ತೆಗೆದು, "ಹುಜೂರ್, ಈ ಕನ್ನಡಿಯನ್ನು ಯಾರ ಮುಖದ ಮುಂದೆ ಹಿಡಿದರೂ ಅವರ ಮನಸ್ಸಿನಲ್ಲಿರುವ ಸಂಗತಿ ಪೂರಾ ತಿಳಿದು ಹೋಗುತ್ತದೆ" ಎಂದು ಹೇಳಿದ.

"ಅದು ನಿಜವೆಂದು ನಾನು ನಂಬುವುದು ಹೇಗೇ?" ಎಂದು ನವಾಬ ಕೇಳಿದ. "ನಂಬುವ ಮಾತಿಗೇನು, ನನ್ನಿದಿರೇ ನೀವು ನೋಡಿದರಾಯಿತಷ್ಟೆ? ಅದಿರಲಿ, ಮೊದಲು ತಾವು ಕೊಂಡುಕೊಳ್ಳುವ ಮಾತು ಹೇಳಿ" ಎಂದು ಫಕೀರನಂದ.

"ಹಾಗಾದರೆ ಇದರ ಬೆಲೆ ಹೇಳು" ಎಂದು ನವಾಬ ಕೇಳಲು ಫಕೀರ ಹಿಂದೆ ಮುಂದೆ ನೋಡಿದ. "ಹುಜೂರ್, ಬೆಲೆ ಕೇಳಿ ನೀವು ಕೋಪಮಾಡುವುದಿಲ್ಲ ಎಂದರೆ ಹೇಳು

ತ್ತೇನೆ," ಎಂದು ಮೆಲ್ಲನೆ ಹೇಳಿದ. "ಕೋಪ ಮಾಡುವುದಿಲ್ಲ" ವೆಂದು ನವಾಬನು ಭರವಸೆ ಕೊಟ್ಟಮೇಲೆ "ಹುಜೂರ್, ಈ ಕನ್ನಡಿಗೆ ನಿಮ್ಮ ಇಡೀ ರಾಜ್ಯವೇ ಬೆಲೆ. ಇದನ್ನು ನೀವು ತೆಗೆದುಕೊಂಡರೆ ನಿಮ್ಮ ಸಿಂಹಾಸನವನ್ನು ನನಗೆ ಕೊಟ್ಟು ನನ್ನ ಉಡುವುಗಳನ್ನು ನೀವು ಧರಿಸಿಕೊಂಡು ಹೋಗಬೇಕಾಗಿ ಬರುತ್ತದೆ" ಎಂದ ಫಕೀರ.

ನವಾಬ ಸ್ವಲ್ಪ ಆಲೋಚನೆಗೆ ಬಿದ್ದ. ಬಳಿಕ ಸಿಂಹಾಸನದಿಂದ ಇಳಿದು ಬಂದು ತನ್ನ ಬೆಲೆ ಬಾಳುವ ನವಾಬೀ ಉಡುಗೆಗಳನ್ನು ಫಕೀರನಿಗೆ ಕೊಟ್ಟ; ಅನಂತರ ಫಕೀರನ ಉಡುಗೆಯನ್ನು ತಾನು ಧರಿಸಿಕೊಂಡು ಅವನ ಕೈಯಿಂದ ಕನ್ನಡಿಯನ್ನು ಪಡೆದುಕೊಂಡ.

ಮಂತ್ರಿ ಸೇನಾನಾಯಕರುಗಳು ಆಚೆಯ ಕೊಠಡಿಯಲ್ಲಿ ನವಾಬನ ಕರೆಗಾಗಿ ಕಾದಿದ್ದರು. ನವಾಬ ಫಕೀರವೇಷದಿಂದ ಅವರ ಮುಂದೆ ಬಂದುದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು.

ನವಾಬನು ಆ ಕಂಗಟ್ಟಿನ ಕನ್ನಡಿಯನ್ನು ಮಂತ್ರಿಯ ಮುಖದ ಮುಂದೆ ಹಿಡಿದ. ವಿಚಿತ್ರ ವೇನೆಂದರೆ, ಮಂತ್ರಿ ಮೇಲೆಮೇಲೆ ಎಷ್ಟೇ ನರಿವಿನಯ ತೋರಿಸುವವನಾಗಿದ್ದರೂ ಒಳಗಿಂದ ನವಾಬನಮೇಲೆ ಕೊಂಚವೂ ಗೌರವವಿರಲಿಲ್ಲ; ವಿಶ್ವಾಸವಿರಲಿಲ್ಲ; ಮಾತ್ರವಲ್ಲ, ಈ ನವಾಬನನ್ನು ಕೊಂದು ತಾನೇ ನವಾಬಾಗಬೇಕೆಂದು ಕೂಡ ತಂತ್ರ ಮಾಡುತಿದ್ದ. ಇದನ್ನೆಲ್ಲಾ ಕಣ್ಣಿಗೆ ಕಟ್ಟಿದಹಾಗೆ ಆ ಕಂಗಟ್ಟಿನ ಕನ್ನಡಿ ತೋರಿಸಿ ಕೊಟ್ಟಿತು.



ನವಾಬ ತನ್ನ ಕೋಪವನ್ನು ನುಂಗಿಕೊಂಡು ಅಂತಃಪುರಕ್ಕೆ ಹೋದ. ಅವನ ರಾಣಿ ದಾಸಿಯರ ನಡುವೆ ಕುಳಿತಿದ್ದಳು. ನವಾಬನನ್ನು ಕಾಣುತ್ತಲೇ ದಾಸಿಯರೆಲ್ಲಾ ಹೊರಟು ಹೋದರು. ನವಾಬ ಕನ್ನಡಿಯನ್ನು ರಾಣಿಯ ಮುಖದ ಮುಂದೆ ಹಿಡಿದ.

ಇದೂ ವಿಚಿತ್ರವೇ. ಅವನ ರಾಣಿಗೆ ನಿಜಕ್ಕೂ ಅವನಮೇಲೆ ಪ್ರೇಮ ವಿರಲಿಲ್ಲ. ಇಷ್ಟು ದಿನವೂ ಅವಳು ನವಾಬನಮೇಲೆ ತೋರಿಸುತ್ತಿದ್ದುದು ಕಳ್ಳ ನಟನೆಯೇ. ಈಗ ಅವಳ ಠಕ್ಕುಗಳನ್ನೆಲ್ಲಾ ತೋರಿಸಿ ಕೊಟ್ಟಿತು ಆ ಕಂಗಟ್ಟಿನ ಕನ್ನಡಿ.

ನವಾಬ ಅಲ್ಲಿಂದ ಹೊರಟು ತನ್ನ ಮಕ್ಕಳ ಮುಖದ ಮುಂದೆಯೂ, ಇನ್ನೂ ತನ್ನ ಹಿತ ಚಿಂತಕರೆಂದು ಇದ್ದವರ ಮುಂದೆಯೂ ಆ ಕನ್ನಡಿಯನ್ನು ಹಿಡಿದು ಹಿಡಿದು ನೋಡಿದ. ಅವರಲ್ಲಿ ಯಾರಿಗೂ ಆವನಮೇಲೆ ಸತ್ಯವಾದ ಪ್ರೀತಿ, ವಿಶ್ವಾಸಗಳು ಇರಲೇ ಇಲ್ಲ.

ಹೀಗೆ ಸತ್ಯವನ್ನು ನೋಡಿದಾಗ ಅವನಿಗೆ ಈ ಪ್ರಪಂಚದ ಮೇಲೆಯೇ ಬೇಸರ ಬಂದಿತು. ರಾಜ್ಯವನ್ನು ಫಕೀರನಿಗೆ ಆಗಲೇ ಕೊಟ್ಟಿರುವ ನಷ್ಟೆ? ವೇಷದಲ್ಲಿ ಫಕೀರನೂ ಆದಾಯಿತು. ಈಗ ನಿಜಕ್ಕೂ ಫಕೀರನಾದ.

ಫಕೀರನಾದ ನವಾಬ ರಾಜಧಾನಿಯನ್ನು ಬಿಟ್ಟು ಕಾಡುಕಾಡು ತಿರುಗಿ ತಾನು ಹುಟ್ಟಿದ ಊರನ್ನು ಸೇರಿಕೊಂಡ. ಆಗ ಕತ್ತಲಾಗಿತ್ತು. ತನ್ನ ಹಿಂದಿನ ಗುಡಿಸಲಿನ ನೆನಪು ಬಂದಿತು. ಅದನ್ನು ಹುಡುಕಿ ಹಿಡಿದು ಒಳಗೆ ಹೊಕ್ಕ.

ಅವನ ತಾಯಿ ಮಂಚದಲ್ಲಿ ಬಿದ್ದುಕೊಂಡು ಸಾಯಲು ಸಿದ್ಧವಾಗಿದ್ದಳು. ಸಣ್ಣದನಿಯಿಂದ "ಮಗನೇ, ನನ್ನ ಮಗನೇ!" ಎಂದು ಕಲ್ಲೂ ಕರಗುವಂತೆ ಕೂಗುತ್ತಿದ್ದಳು.

ನವಾಬ ತಾಯಿಯ ಬಳಿಗೆ ಸಾರಿ ಆ ಕಂಗಟ್ಟಿನ ಕನ್ನಡಿಯನ್ನು ಅವಳ ಮುಖದ ಮುಂದೆ ಹಿಡಿದ. ಆ ತಾಯಿಯ ಪ್ರೀತಿಯಲ್ಲಿ ಯಾವ ಕಲ್ಮಷವೂ ಇರಲಿಲ್ಲ. ಹಿಂದಿಷ್ಟೂ ಸ್ವಾರ್ಥವಿರಲಿಲ್ಲ. ನವಾಬನೀಗ ಭೂಲೋಕ ವನ್ನು ಆಳುವ ನವಾಬನಲ್ಲ. ಊರಿಗೆ ಅರಸ ನಾದರೂ ತಾಯಿಗೆ ಮಗನೇ ಎಂಬ ಸತ್ಯ ಕಂಡ ಮಾನವ. ಎಲ್ಲಾ ಬಿಟ್ಟು ನಿಜವಾದ ಪ್ರೇಮವನ್ನು ಅರಸಿ ಹುಡುಕಿದ ಸಂನ್ಯಾಸಿ. ತಾಯಿಯ ಪ್ರೇಮಕ್ಕೆ ಸಮಾನವೇ ಇಲ್ಲ ಎಂಬುದನ್ನು ಆ ಕನ್ನಡಿ ತೋರಿಸಿಕೊಟ್ಟಿತು. ಆತನು ಸಣ್ಣ ಮಗುವಿನಂತೆ ಅಳುತ್ತ "ಅಮ್ಮ ಅಮ್ಮಾ" ಎಂದು ಕರೆದು ಕೂಗಿದ.

ಸಾಯಲು ಸಿದ್ಧಳಾದ ತಾಯಿ ಕಣ್ಣು ತೆರೆದಳು. ಅವಳ ಕಣ್ಣುಗಳಲ್ಲಿ ಮುತ್ತುಗಳಂತೆ ಎರಡು ನೀರಬಿಂದುಗಳಿದ್ದುವು. ಆನಂದದಿಂದ ಮತ್ತೆ ಅವಳು ಕಣ್ಣು ಮುಚ್ಚಿದಳು. ಅಷ್ಟೇ, ಮತ್ತೆ ಅವಳು ಕಣ್ಣು ತೆರೆಯಲಿಲ್ಲ. ನವಾಬ ಎಲ್ಲಾ ಮಮಕಾರಗಳನ್ನೂ ಬಿಟ್ಟು ನಿಜ ಫಕೀರ ನಾಗಿ ದೇಶಾಟನೆ ಮಾಡುತ್ತಾ ಹೊರಟ.





# ಪಾಟಲಿಪುತ್ರ

ಅನೇಕ ಸಂವತ್ಸರಗಳ ಕೆಳಗೆ ದಕ್ಷಿಣಭಾರತದಲ್ಲಿ ಚಿಂಚಿನಿ ಎಂಬ ಸಮುದ್ರತೀರ ಪಟ್ಟಣದಲ್ಲಿ ಭೋಜನೆಂಬ ಗೃಹಸ್ಥನಿದ್ದನು. ಆತನಿಗೆ ಮೂವರು ಪುತ್ರಿಯರಿದ್ದರು. ಒಂದು ಸಾರಿ ಯಾತ್ರಾರ್ಥಿಗಳಾಗಿ ಉತ್ತರದ ಕಡೆಯಿಂದ ಬಂದ ಮೂವರು ಸಹೋದರರಿಗೆ ಭೋಜನು ತನ್ನ ಕುವರಿಯರನ್ನು ಕೊಟ್ಟು ಮದುವೆ ಮಾಡಿದನು. ಆ ವರತ್ರಯಕ್ಕೆ ಮನೆಮಾರು, ನೆಂಟರಿಷ್ಟರು ಇಲ್ಲದುದರಿಂದ ಮಾವನ ಮನೆಯಲ್ಲೇ ನೆಲೆಸಿದರು. ಭೋಜನಿಗೆ ವಯಸ್ಸಾದುದರಿಂದ ತಪಸ್ಸುಮಾಡಲು ಗಂಗಾತೀರಕ್ಕೆ ಪ್ರಯಾಣ ಬೆಳೆಸಿದ. ಅನಂತರ ಮನೆಯ ಯಜಮಾನಿಕೆಯನ್ನು ಆ ಮೂವರೂ ಸಹೋದರರು ವಹಿಸಿಕೊಂಡರು.

ಹೀಗಿರುವಲ್ಲಿ ಆ ಪ್ರಾಂತದಲ್ಲಿ ಭೀಕರ ಬರಬಂತು. ಜೀವಿಸುವುದೇ ದುರ್ಭರವಾಯಿತು. ಈ ದುಸ್ಥಿತಿಯಲ್ಲಿ ಸಂಸಾರ ನಿರ್ವಹಿಸಲಾರದೆ ಆ ಮೂವರು ಸಹೋದರರು ತಮ್ಮ ಪತ್ನಿಯರಿಗೆ ತಿಳಿಯದಂತೆ ಎಲ್ಲಿಗೋ ಪರಾರಿಯಾದರು. ಆ ಸಮಯದಲ್ಲಿ ಎರಡನೆಯಾಕೆ ತುಂಬು ಗರ್ಭಿಣಿ. ಗಂಡಂದಿರು ಓಡಿಹೋಗಲು ಆ ಮೂವರು ಅಕ್ಕತಂಗಿಯರು ಅನಾಥೆಯರಾದರು. ಅವರು ತಮ್ಮ ತಂದೆಯ ಸ್ನೇಹಿತನಾದ ಯಜ್ಞದತ್ತನ ನೆರೆಸೇರಿ ಕಡು ಕಷ್ಟದಿಂದ ಜೀವನ ಸಾಗಿಸುತ್ತಿದ್ದರು. ಕಾಲಕ್ರಮೇಣ ಬಸುರಿಯಾಗಿದ್ದಾಕೆ ಗಂಡು ಕೂಸನ್ನು ಹೆತ್ತಳು. ಅವರ ವಂಶಕ್ಕೆ ಅವನೊಬ್ಬನೇ ಮಗುವಾದುದರಿಂದ ಆ ಸಹೋದರಿಯರು ಆ ಕೂಸನ್ನು ಅತಿ ಮಮತೆಯಿಂದ ಸಲಹುತ್ತಿದ್ದರು. ಮಗುವಿಗೆ ಪುತ್ರಕನೆಂದು ನಾಮಕರಣ ಮಾಡಿದರು.

ಪುತ್ರಕನು ಬೆಳೆದು ದೊಡ್ಡವನಾಗಿ ಕೆಲಸ ಹುಡುಕಿಕೊಂಡು ಉತ್ತರದೇಶದ ಕಡೆ ಹೊರಟ. ವಿಂಧ್ಯಪ್ರಾಂತ್ಯದಲ್ಲಿ ಒಂದು ಅರಣ್ಯಮಾರ್ಗವಾಗಿ ಹೋಗುತ್ತಿರಲು ಅಲ್ಲೊಂದು ಕಡೆ ಈರ್ವರು ಹೊಡೆದಾಡಿಕೊಳ್ಳುತ್ತಿರುವುದು ಕಂಡುಬಂತು. ನೆಟ್ಟಗೆ ಅವರಬಳಿಗೆ ಹೋಗಿ "ನೀವಿಬ್ಬರೂ ಅಣ್ಣತಮ್ಮಂದಿರಂತೆ ಕಾಣು

ಸಿ. ವೀರರಾಘವ ಆಚಾರ್ಯ



ವಿರಿ. ಹೀಗೇಕೆ ಜಗಳವಾಡುತ್ತಿರುವಿರಿ?'' ಎಂದು ಕೇಳಿದ. ಅದಕ್ಕೆ ಅವರು ಹೀಗೆಂದರು: ''ನಾವು ಮಾಯಾಸುರನ ಮಕ್ಕಳು. ನಮ್ಮ ತಂದೆಯ ಆಸ್ತಿ ಪಾದುಕೆ, ಕೋಲು ಮತ್ತು ತಪ್ಪಲೆ ಯಾರಿಗೆ ಸೇರಬೇಕೋ ನಿರ್ಧರಿಸಲು ನಮ್ಮ, ಭುಜಬಲವನ್ನು ಪರೀಕ್ಷಿಸುತ್ತಿರುವೆವು. ಜಯಿಸಿದವನೇ ಅದಕ್ಕೆ ಹಕ್ಕುದಾರ.''

ಪುತ್ರಕನು ಅವರ ಮಾತುಗಳನ್ನು ಕೇಳಿ ''ಇಂಥ ಅಲ್ಪವಸ್ತುಗಳಿಗಾಗಿ ಹೊಡೆದಾಡಲೇಕೆ?'' ಎಂದು ಕೇಳಿದ.

''ಇವೇನೂ ಕಡೆಗಣಿಸುವ ವಸ್ತುಗಳಲ್ಲ. ಈ ಪಾದುಕೆಗಳನ್ನು ಮೆಟ್ಟಿಕೊಂಡರೆ ಅದೃಶ್ಯವಾಗಿ ಗಗನಮಾರ್ಗದಲ್ಲಿ ಎಲ್ಲಿಗೆಂದರೆ ಅಲ್ಲಿಗೆ ಹೋಗಬಹುದು. ಈ ತಪ್ಪಲೆಯಲ್ಲಿ ಕೋರಿದಾಗ ಕೋರಿಕೊಂಡ ಆಹಾರ ಸಿಗುವುದು. ಈ ಕೋಲಿನಿಂದ ನೆಲದಮೇಲೆ ಬರೆದುದೆಲ್ಲಾ ನಿಜವಾಗುತ್ತದೆ'' ಎಂದು ಮಾರ್ನುಡಿದರು.

''ನಿಮ್ಮ ಪರಾಕ್ರಮವನ್ನು ಪರೀಕ್ಷೆಮಾಡಿಕೊಳ್ಳಲು ಮುಷ್ಟಿಯುದ್ಧಕ್ಕಿಂತಲೂ ಬೇರೆ ಯಾವ ಉಪಾಯವೂ ಇಲ್ಲವೇ? ನಿಮ್ಮಲ್ಲಿ ಯಾರು ವೇಗವಾಗಿ ಓಡುವರೋ ಅವರಿಗೇ ಈ ಆಸ್ತಿ ಲಭಿಸುವುದು ಉತ್ತಮ. ಎಲ್ಲಿ, ಓಡಿ ನೋಡೋಣ'' ಎಂದ ಪುತ್ರಕ.

ಮಾಯಾಸುರನ ಮಕ್ಕಳಿಗೆ ಈ ಯೋಚನೆ ಸರಿದೋರಿತು. ಅವರು ಓಡುವ ಪಂದ್ಯಕ್ಕೆ ಒಪ್ಪಿದರು. ಅಲ್ಲಿಂದ ಅವರು ಒಂದು ನಿಶ್ಚಿತ ಸ್ಥಾನವನ್ನು ಮುಟ್ಟಿ ಹಿಂತಿರಗಬೇಕೆಂದು ನಿರ್ಧಾರವಾಯಿತು. ಅವರು ಅತ್ತ ಓಡಿದ್ದೇ ತಡ. ಪುತ್ರಕನು ಕೋಲು ತಪ್ಪಲೆಗಳನ್ನು ಎತ್ತಿಕೊಂಡು, ಪಾದುಕೆಗಳನ್ನು ಹಾಕಿಕೊಂಡು ಅದೃಶ್ಯನಾಗಿ ಆಕಾಶ ಮಾರ್ಗದಲ್ಲಿ ಹೊರಟುಬಿಟ್ಟನು.

ಹಾಗೆ ಸ್ವಲ್ಪದೂರ ಹೋಗಲು ಆತನಿಗೆ ಒಂದು ಸುಂದರವಾದ ಪಟ್ಟಣ ಕಾಣಿಸಿತು. ಆ ನಗರದ ಹೆಸರು ಆಕರ್ಷಕ ಅಂತ. ಅಲ್ಲಿನ ವಿಚಿತ್ರಗಳನ್ನು ನೋಡಬೇಕೆಂಬ ಕುತೂಹಲ ವಾಯಿತು ಪುತ್ರಕನಿಗೆ. ಆ ನಗರದಲ್ಲಿ ಇಳಿದು ಅಜುಗೂಲಜ್ಜಿಯ ಮನೆ ಸೇರಿದ.

ಆ ನಗರದ ರಾಜಪುತ್ರಿ ಪಾಟಲಿ ಸುರಸುಂದರಿ. ಅವಳೊಬ್ಬ ಅನಾಮಧೇಯನನ್ನು ವಿವಾಹವಾಗುವಳೆಂದು ದೈವಜ್ಞನೊಬ್ಬನು

ಹೇಳಲು ರಾಜನು ಚಿಂತಾಕ್ರಾಂತನಾದನು. ಯಾವ ಸಮಯಕ್ಕೆ ಏನಾಗುವುದೋ ಎಂದು ಆತನು ತನ್ನ ಮಗಳನ್ನು ಆರನೇ ಅಂತಸ್ತಿನಲ್ಲಿ ಭದ್ರವಾಗಿರಿಸಿ, ಮಲಗುವ ಮನೆಯ ಹತ್ತಿರ ಬಲವಾದ ಕಾವಲು ಇರಿಸಿದ್ದನು.

ಈ ವಿಷಯ ಅಡುಗೂಲಜ್ಜಿಯಿಂದ ಕೇಳಿದ ಪುತ್ರಕನ ಕುತೂಹಲ ಕೆರಳಿತು. ಪಾಟಲಿಯನ್ನು ಒಂದುಸಾರಿ ನೋಡಬೇಕೆಂದು ತವಕಗೊಂಡನು. ಅಂದು ರಾತ್ರಿ ಪಾದುಕೆಗಳ ಪ್ರಭಾವದಿಂದ ಅರಮನೆಯ ಆರನೇ ಅಂತಸ್ತನ್ನುಸೇರಿ, ಅದೃಶ್ಯರೂಪದಲ್ಲಿ ಪಾಟಲಿಯ ಶಯನಮಂದಿರವನ್ನು ಪ್ರವೇಶಿಸಿದ. ಪಾಟಲಿಯ ರೂಪಲಾವಣ್ಯಗಳನ್ನು ಕಂಡು ಪುತ್ರಕನಿಗೆ ಅಮಿತಾನಂದವಾಯಿತು. ದುರ್ಭರವಾದ ಸೆರೆವಾಸವನ್ನು ಅನುಭವಿಸಲಾರದೆ ವಿಮುಕ್ತಿಗಾಗಿ ಎದುರು ನೋಡುತ್ತಿದ್ದ ಪಾಟಲಿಗೆ, ಯಾರಿಗೂ ತಿಳಿಯದಂತೆ ತನ್ನ ಶಯನಾಗಾರವನ್ನು ಹೊಕ್ಕ ಪುತ್ರಕನು ದೇವರಂತೆ ತೋರಿಬಂದನು. ಅವರಿಬ್ಬರಲ್ಲಿ ಪ್ರೇಮ ಅಂಕುರಿಸಿತು. ವಿವಾಹ ಮಾಡಿಕೊಳ್ಳಲು ನಿಶ್ಚಯಿಸಿದರು. ರಾಜನು ಈ ವಿವಾಹಕ್ಕೆ ಅಂಗೀಕರಿಸಲಾರನೆಂದು ಅವರಿಗೆ ತಿಳಿದಿತ್ತು. ಆದ್ದರಿಂದ ಪುತ್ರಕನು ಪಾಟಲಿಯನ್ನು ಎತ್ತಿಕೊಂಡು ಪಾದುಕೆಗಳನ್ನು ಧರಿಸಿ ಅದೃಶ್ಯರೂಪದಲ್ಲಿ ಗಗನಮಾರ್ಗವಾಗಿ ಹೊರಟುಬಿಟ್ಟನು.

ಬೆಳಕು ಹರಿಯುವ ಹೊತ್ತಿಗೆ ಅವರು ಬಹುದೂರ ಸಾಗಿ ಅಲ್ಲೊಂದುಕಡೆ ಇಳಿದುಕೊಂಡರು. ತಪ್ಪಲೆಯಿಂದ ತಮಗೆ ಬೇಕಾದ ಆಹಾರ ಪಡೆದು ಹಸಿವಿನ ಬಾಧೆಯನ್ನು ನೀಗಿಸಿಕೊಂಡರು. ಆದರೆ ರಾಜಭೋಗವನ್ನು ಕಂಡ ಪಾಟಲಿಗೆ ಆ ನಿರ್ಜನ ಪ್ರದೇಶದಲ್ಲಿರಲು ಶಕ್ಯವಾಗಲಿಲ್ಲ. ಆಕೆಯ ಕೋರಿಕೆಯನ್ನು ಈಡೇರಿಸಲು ಪುತ್ರಕನು ತನ್ನ ಹತ್ತಿರವಿದ್ದ ಕೋಲಿನಿಂದ ನೆಲದಮೇಲೆ ಒಂದು ಭಾರಿ ಪಟ್ಟಣವನ್ನು ಬರೆದ. ತಕ್ಷಣ ಅಲ್ಲೊಂದು ಮಹಾಪಟ್ಟಣವೆದ್ದಿತು. ಅದನ್ನು ಪಾಟಲೀಪುತ್ರಕರು ಬಹಳಕಾಲ ಪರಿಪಾಲಿಸಿದರು. ಆ ನಗರವೇ ಪಾಟಲೀಪುತ್ರ ವೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ಅದನ್ನೇ ಇಂದು ನಾವು ಪಾಟ್ನಾ ಎಂದು ಕರೆಯುವೆವು.



# ಚಂದ್ರ

ಚಂದ್ರಭೂಮಿಗೆ ಸಮೀಪಬಂದರೆ ಇಷ್ಟು ಮೈಲು ದೂರ: (2,21,600) ದೂರಕೆ ಹೋದರೆ ಆಗುವುದಾಗ ಅಷ್ಟು ಮೈಲುದೂರ: (2,52,970). ಚಂದಮಾಮನಾ ಸುತ್ತಿನ ಅಳತೆ ಇಷ್ಟು ಮೈಲು ನೋಡಿ: (6,795) ಮಧ್ಯರೇಖೆ ಮೈಲುಗಳಿಷ್ಟಿರುವುವು: (2,163) ವಿಸ್ತಾರ ಚದರ ಮೈಲಿಷ್ಟು: (1,46,60,000) ಅದರ ಭಾರ ಟನ್ನುಗಳಿಷ್ಟು: (7,80,000,00,00,000,00,00,000)

ಭೂಮಿಯಸುತ್ತು ತಿರುಗುವ ವಲಯದ ನೀಳ ವಿಷ್ಟುಮೈಲು: (15,00,680). ಗಂಟೆಗಿಷ್ಟು ಮೈಲ್ (2,288) ವೇಗದಿಸಾಗಿ, ವಲಯಸುತ್ತುವಾ ಕಾಲವಿದು: ೨೭ ದಿನ, ೭ ಗಂಟೆ, ೪೩ ನಿಮಿಷ, ಕ್ಷಣ ೧೧.

ಹುಣ್ಣಿಮೆ ಚಂದ್ರನ ಪ್ರಕಾಶಕಿಂತಲು ಸೂರ್ಯನ ಹೆಚ್ಚಿನಮಡಿಯಿಷ್ಟು: (6,18,000) ಚಂದ್ರಗೆಬೀಳುವ ಸೂರ್ಯನ ರಶ್ಮಿಯ ನೂರರ ಹದಿನೇಳ್ ಬೆಳುದಿಂಗಳ್.

ಭೂಮಿಯ ಎಳೆತಕೆ ಚಂದ್ರನ ಎಳೆತವು ಆರುಭಾಗ ಕಡಿಮೆ. ಭೂಮಿಯಲಿರುಪಿರು ಮಣಗಳು ಚಂದ್ರನಲೆರಡೂವರೆ ವೀಸೆ.

ಭೂಮಿಗಿಂತಲೂ ಚಂದ್ರನಮೇಲೆ ಶೀತೋಷ್ಣಗಳಧಿಕ. ಹಗಲಿನ ಉಷ್ಣವು ೨೦೦ ಡಿಗ್ರಿ, ರಾತ್ರಿಮಂಜಿಗೂ ಮಿಗಿಲ್ ೨೦೦.

ದೊಡ್ಡ ಟೆಲಿಸ್ಕೋಪಿಂದ ನೋಡಿದರೆ, ಕಾಂಬುದು ಮೈಲಿಪ್ಪತ್ತೈದರಲೇ. ನೀರುಗಾಳಿ ಪ್ರಾಣಿಗಳೇನಿಲ್ಲದ, ಸೂರ್ಯ–ಭೂಮಿಗಳ ಸುತ್ತುವದೊಂದು, ಚಿತ್ರ ಉಪಗ್ರಹ ಚಂದ್ರ!

# 'ಕಟ್ಟೆಬಲ್ಲವರಿಗೆ'

(ಹಿಂದಿನ ಉತ್ತರ:)

ಪೈರಿಗೆ ಉಪಕಾರಿಯಾದ
ಊರಿಗೆಲ್ಲ ತಾಯಿಯಾದ
ಹಾಲು ಮೊಸರು ಬೆಣ್ಣೆಯೀವ
ಹುಲ್ಲು ನೀರು ಕೊಂಬ ಜೀವ
ಉಳುಮೆಗೆ ತಾಯಾಗಿಹ ಆ
ಕಳಕೊಂಡಾಡಿದರು ಹಳ್ಳಿಮಂದಿಗಳೆಲ್ಲ.

—ಕೆ. ವಾಸುದೇವಮೂರ್ತಿ

ಪಾಲುಣಿಸಿ ಪೊರೆದ ಗೋವಂ
ಪಾಲಿಸದೇ ಮುಪ್ಪಿನಲ್ಲಿ ಕಟುಕಂಗೀಯಲ್
ಎಳೆದರು ಪೋಗದೆ ನಿಂತಾ
ಕಳಕೊಂಡಾಡಿದರು ಹಳ್ಳಿಮಂದಿಗಳೆಲ್ಲ.

—ಪಿ ಆರ್. ಬಸ್ತಿಮಾಸ್ತರ.

ಬಿ. ಪಿ. ಭಟ್ಟ, ಕೋಟೀಶ್ವರ ಇವರು ಕಳುಹಿಸಿದ್ದು:

ಕಾಗೆಯದಂ ಗಬಕನುಗುಳಿತೊಳೆದಂಬಾಯಂ

(ಉತ್ತರಕ್ಕೆ ತಿರುಗಿಸಿ ನೋಡಿ)

ಬೇಗ ಕುರುಡ ರಾವು ವೀಳ್ಯ
ಕಾಗಿ ತಟ್ಟಿ ತಡವಿ ವೀಳ್ಯ
ಕೈಗೆ ಸಿಕ್ಕಿ ಸುಣ್ಣ ತಡವಿ
ಬಾಯ್ಗೆ ತುರುಕಿ ಮತ್ತು ತಡವ
ಲಾಗ ಅಡಕೆ ಬದಲು ಕಲ್ಲು
ಕೈಗೆ ಸಿಗಲ್ ಬಾಯ್ಗೆ ಹಾಕಿ
ಹಾಗು ಹೀಗು ಒತ್ತಿ ಜಗಿಯೆ
ಆಗ ಕಠಕ್ ಹಲ್ಲು ಮುರಿದು
ಬಾಯ್ಗೆ ರಕ್ತವಿಳಿದು ಕೆಂಪ
ಗಾಗಿ ಉರಿದು ಕಣ್ ಚುರುಚುರು
ಕಾಗೆಯದಂ ಗಬಕ ನುಗಿದುತೊಳೆದಂಬಾಯಂ



# ಚಂದ್ರಬಿಂಬದಲ್ಲಿ ಮೊಲ

ಹುಣ್ಣಿಮೆಯಂದು ನಾವು ಚಂದ್ರನನ್ನು ನೋಡಿದರೆ ಚಂದಮಾಮ ಶೋಭಾಯಮಾನವಾಗಿ ಕಾಣಿಸುವನಷ್ಟೆ! ಆದರೆ ಆ ಚಂದ್ರಬಿಂಬದ ನಡುವೆ ಮೊಲದ ಆಕಾರದಂತೆ ಒಂದು ಮಚ್ಚೆ ಇರುತ್ತದೆ. ಚಂದ್ರನಲ್ಲಿ ಈ ಮೊಲ ಕಾಣಿಸಲು ಕಾರಣ ಈಗ ಹೇಳುತ್ತೇನೆ.

ಒಂದುಸಾರಿ ಅಂದರೆ ಸಾವಿರಾರು ವರ್ಷಗಳಹಿಂದೆ ಚಂದಮಾಮ ಬೆಳ್ಳಗೆ ಬೆಳ್ಳಿಯ ತಟ್ಟೆಯಂತೆ ಇದ್ದ. ಆ ಕಾಲದಲ್ಲಿ ಒಂದಾನೊಂದು ಅರಣ್ಯದಲ್ಲಿ ಒಂದು ಮೊಲ, ಒಂದು ಕಪಿ, ಒಂದು ನರಿ, ಒಂದು ಬೆಕ್ಕು ಗೆಳೆಯರಾಗಿದ್ದರು. ಮೊಲ ತನ್ನ ಮೂವರು ಮಿತ್ರರಿಗೂ ಉತ್ತಮ ಮಾನವಧರ್ಮಗಳನ್ನು ತಿಳಿಸುತ್ತಾ, ಪಶುತ್ವದಿಂದ ಪಾರಾಗುವಂತೆ ಹಿತಬೋಧೆ ಮಾಡುತಿತ್ತು. ಉಳಿದ ಜಂತುಗಳು ತಮ್ಮ ಸ್ನೇಹಿತನಾದ ಮೊಲವನ್ನು ಗೌರವದಿಂದ ಕಾಣುತ್ತಿದ್ದುವೇ ಹೊರತು ಅದು ಹೇಳುತ್ತಿದ್ದ ಹಿತವಚನಗಳನ್ನು ಪಾಲಿಸುತ್ತಿರಲಿಲ್ಲ.

ಏಕೆಂದರೆ ಕೋತಿ ಚಪಲಚಿತ್ತವುಳ್ಳಪ್ರಾಣಿ. ನರಿಯೋ ಉಪಾಯಶಾಲಿ; ಬೆಕ್ಕು ಕಳ್ಳಬುದ್ಧಿಯುಳ್ಳ ಜಂತು. ಮೊಲವೆಷ್ಟು ಉಪದೇಶ ಮಾಡಿದರೂ ಅವುಗಳಿಗೆ ಜನ್ಮತಃ ಬಂದ ಈ ಸ್ವಭಾವಗಳು ಬದಲಾವಣೆಯಾಗಲಿಲ್ಲ.

ಹೀಗಿರುವಾಗ ಒಂದುಸಾರಿ ಕಾರ್ತಿಕ ಹುಣ್ಣಿಮೆ ಬಂತು. ಅಂದು ಪ್ರಾತಃಕಾಲ ಮೊಲ ತನ್ನ ಸ್ನೇಹಿತರೊಂದಿಗೆ "ಅಣ್ಣಗಳಿರಾ, ಇಂದು ಕಾರ್ತಿಕ ಹುಣ್ಣಿಮೆ. ಉಪವಾಸ ವಿರಬೇಕಾದ ದಿನ. ಹಗಲೆಲ್ಲಾ ಉಪವಾಸದಿಂದ ಇದ್ದು, ಸಂಜೆಯಾದ ಕೂಡಲೇ ಅತಿಥಿಗಳಿಗೆ ಭೋಜನವಿಟ್ಟು, ಅನಂತರ ಚಂದ್ರದರ್ಶನಮಾಡಿ, ನಾವು ಊಟ ಮಾಡಿದರೆ ನಮಗೆ ಮುಕ್ತಿ ಲಭಿಸುವುದು. ಇಂದು ನಾನು ಆರೀತಿ ಆಚರಿಸುವೆನು. ನೀವೂ ದೃಢಮನಸ್ಸಿನಿಂದ ಅದೇಪ್ರಕಾರ ನಡೆಯಬೇಕೆಂದು ನನ್ನ ಕೋರಿಕೆ" ಎಂದು ಹೇಳಿದಳು. ಕೋತಿ, ನರಿ, ಬೆಕ್ಕು ತಲೆಯಲ್ಲಾಡಿಸಿ

ಆರ್. ಸತ್ಯವತಿ






ತಾವೂಸಹ ಉಪವಾಸಮಾಡಿ, ಚಂದ್ರೋದಯವಾದಕೂಡಲೇ ಊಟ ಮಾಡುವೆವೆಂದು ಮಾತುಕೊಟ್ಟುವು. ಆಮೇಲೆ ಅವೆಲ್ಲಾ ತಲಾ ಒಂದೊಂದು ದಾರಿಯಲ್ಲಿ ಹೊರಟವು.

ಉಪವಾಸ ವಿರಲೇಬೇಕೆಂದು ನಿಶ್ಚಯಿಸಿದ ಮರುಕ್ಷಣವೇ ಕೋತಿಗೆ ಎಲ್ಲಿಲ್ಲದ ಹಸಿವು ಉಂಟಾಯಿತು.

"ಅಮ್ಮೊಮ್ಮೋ, ಕತ್ತಲಾಗುವ ವರೆವಿಗೂ ಈ ಹಸಿವಿನಬಾಧೆ ತಾಳಬಲ್ಲೆನೇ? ಬದುಕಿದ್ದರೆ ಮುಂದಿನ ಕಾರ್ತಿಕ ಹುಣ್ಣಿಮೆಗೆ ಉಪವಾಸ ವಿರಬಹುದು" ಎಂದುಕೊಂಡು, ಕಪಿ ಹಣ್ಣುಗಳಿಗಾಗಿ ಹುಡುಕಿಕೊಂಡು ಹೋಯಿತು.

ನರಿ ಉಪವಾಸವಿರಲು ನಿರ್ಧರಿಸಿ, ಹುಲಿಗಳು ತಿರುಗಾಡುವ ಸ್ಥಳಕ್ಕೆ ಹೋಯಿತು. ಹೊಟ್ಟೆ ದಹಿಸುತ್ತಿದ್ದರೂ ಸಹ ಆಹಾರವನ್ನು ತೆಗೆದುಕೊಳ್ಳಕೂಡದೆಂದು ಅದು ಮನಸ್ಸು ಮಾಡಿತು. ಆದರೆ ಕೊಂಚದೂರ ಹೋಗಲು ಒಂದು ಪೊದೆಯಲ್ಲಿ ಅರ್ಧತಿಂದು ಉಳಿದಿದ್ದ ಜಿಂಕೆಯ ಶರೀರವೊಂದು ಅದಕ್ಕೆ ಕಾಣಿಸಿತು. 'ಯಾವುದೋ ಹುಲಿ ಜಿಂಕೆಯೊಂದನ್ನು ಕೊಂದು ಸ್ವಲ್ಪ ತಿಂದು ಉಳಿದುದನ್ನು ಇಲ್ಲಿ ಬಚ್ಚಿಟ್ಟಿದೆ. ನಾನು ಉಪವಾಸದ ಕಾರಣದಿಂದಾಗಿ ಹಾಗೇ ಬಿಟ್ಟುಬಿಟ್ಟರೆ ರಾತ್ರಿಯಾದ ಮೇಲೆ ನನಗೆ ಆಹಾರ ಸಿಗುವುದೋ ಇಲ್ಲವೋ' ಎಂದುಕೊಂಡು ನರಿ ಉಪವಾಸದ ಆಲೋಚನೆಯನ್ನು ಬದಿಗೊತ್ತಿ ಭೋಜನವನ್ನು ಮಾಡಲು ಉಪಕ್ರಮಿಸಿತು.

ಬೆಕ್ಕು ಸಾಯಂಕಾಲದವರೆವಿಗೂ ನಿದ್ದೆ ಮಾಡುವ ಉದ್ದೇಶದಿಂದ ಒಂದು ಮರವೇರಿತು. ಆದರೆ ಅದಕ್ಕೆ ಅಕಸ್ಮಾತ್ ಆ ಮರದ ಒಂದು ಕೊಂಬೆಯಮೇಲೆ ಒಂದು ಪಕ್ಷಿಯ ಗೂಡು ಕಂಡು ಬಂತು. ಅದರಲ್ಲಿ ಅನೇಕ ಮರಿಗಳಿದ್ದವು. ಬೆಕ್ಕು ಉಪವಾಸದ ವಿಷಯವನ್ನು ಮರೆತು ಆ ಮರಿಗಳನ್ನು ಭಕ್ಷಿಸಿತು.

ನಾಲ್ವರು ಮಿತ್ರರಲ್ಲಿ ಮೊಲ ಮಾತ್ರ ಸಾಯಂಕಾಲದವರೆವಿಗೂಉಪವಾಸವಿದ್ದಿತು. ಸೂರ್ಯಾಸ್ತಮಯವಾಗಿ ಆಗತಾನೇ ಚಂದ್ರೋದಯವಾಗುತಿತ್ತು. ಮೊಲಕ್ಕೆಒಂದು ಚಿಂತೆ ಹಿಡಿಯಿತು. ಅತಿಥಿ ಅಭ್ಯಾಗತರಾರೂ ಕಾಣಿಸಲಿಲ್ಲವಲ್ಲಾ ಎಂಬುದೇ ಆ ಚಿಂತೆ. ಅತಿಥಿಗೆ ಊಟವಿಟ್ಟನಂತರ ತಾನು ಊಟ

ಮಾಡಿದರೆ ಪುಣ್ಯಕರವಾದುದೆಂದು ಮೊಲದ ಅಭಿಪ್ರಾಯ. ಅಂತಲೇ ಅತಿಥಿಯ ಬರುವಿಕೆಗಾಗಿ ಎದುರು ನೋಡುತಿತ್ತು.

ಮೊಲದ ನಿಷ್ಠೆಯನ್ನು ಗಮನಿಸುತ್ತಿದ್ದ ಚಂದ್ರನು ಮಾನವ ವೇಷವನ್ನು ಧರಿಸಿ ಅದನ್ನು ಪರೀಕ್ಷಿಸಲು ಇಳಿಗೆ ಬಂದ.

"ಬೆಳಗಿನಿಂದ ಉಪವಾಸವಿದ್ದೇನೆ. ಈ ಅರಣ್ಯದಲ್ಲಿ ಊಟ ಹಾಕುವವರು ಯಾರೂ ಕಾಣಿಸಲಿಲ್ಲ. ನನಗೊಂದಿಷ್ಟು ಊಟಹಾಕಿ ಪುಣ್ಯಕಟ್ಟಿಕೊಳ್ಳುವೆಯಾ?" ಎಂದು ಚಂದ್ರನು ಮೊಲವನ್ನು ಕೇಳಿದ.

"ಅಯ್ಯಾ, ನನಗೆ ಬೇಕಾದ ಸೊಪ್ಪು ಸದೆ ಇಲ್ಲಿ ಪುಷ್ಕಲವಾಗಿದೆ. ಆದರೆ ನಿನಗೆ ಉಚಿತವಾದ ಭೋಜನ ಎಲ್ಲಿ ಸಿಗುತ್ತದೆ? ಆದುದರಿಂದ ನನ್ನನ್ನು ಕೊಂದು ನಿನ್ನ ಕ್ಷುದ್ಬಾಧೆಯನ್ನು ತೀರಿಸಿಕೊಂಡು, ನನಗೆ ಮುಕ್ತಿಯನ್ನು ಪ್ರಸಾದಿಸು" ಎಂದಿತು ಮೊಲ.

"ಕಾರ್ತಿಕ ಹುಣ್ಣಿಮೆಯ ದಿನ ಜೀವಹಿಂಸೆ ಮಾಡುವುದುಂಟೇ? ನಾನು ನಿನ್ನನ್ನು ಕೊಲ್ಲಲಾರೆ" ಎಂದ ಚಂದ್ರ.

"ಅಯ್ಯಾ, ಅದಕ್ಕಾಗಿ ಚಿಂತಿಸಬೇಡ. ನೀನು ಒಣಗಿದ ಸಮಿತ್ತುಗಳನ್ನು ಜೊತೆ ಸೇರಿಸಿ ಬೆಂಕಿಯನ್ನು ಮಾಡು. ನಾನೇ ಅದರಲ್ಲಿ ಆಹುತಿ ಯಾಗುವೆನು. ಆ ತರುವಾಯ ನೀನು ನನ್ನನ್ನು ಭುಜಿಸಬಹುದು" ಎಂದು ಮೊಲ ವೆಂದಿತು.

ಮಾನವ ರೂಪದಲ್ಲಿದ್ದ ಚಂದ್ರನು ಕಟ್ಟಿಗೆಯನ್ನು ಶೇಖರಿಸಿ ಉರಿಹಾಕಿದ. ಮೊಲ ಒಂದುಸಾರಿ ಭಗವಂತನನ್ನು ಸ್ಮರಿಸಿ, ಆ ಬೆಂಕಿಗೆ ಹಾರಿತು. ಆಗ ಬೆಂಕಿಯ ಜ್ವಾಲೆಗಳು ಮೊಲವನ್ನು ಸೋಂಕಲೇ ಇಲ್ಲ.

"ಅಯ್ಯಾ, ನನ್ನನ್ನು ಈ ಬೆಂಕಿ ಸುಡುತ್ತಿಲ್ಲವಲ್ಲಾ, ನಾನೇನು ಮಾಡಲಿ? ನಿಮ್ಮ ಹಸಿವನ್ನು ನೀಗುವುದಾದರೂ ಹೇಗೆ?" ಎಂದು ಪರಿತಪಿಸಿತು ಮೊಲ.

ಚಂದಮನು ನಿಜಸ್ವರೂಪದಲ್ಲಿ ಪ್ರತ್ಯಕ್ಷನಾಗಿ, ಮೊಲವನ್ನು ಎತ್ತಿಕೊಂಡು "ಎಲೈ ಮೊಲವೇ, ನಿನ್ನ ಜನ್ಮ ಪುನೀತವಾಯಿತು. ನಿನ್ನನ್ನು ನನ್ನೊಂದಿಗೆ ಶಾಶ್ವತವಾಗಿಟ್ಟುಕೊಳ್ಳುತ್ತೇನೆ. ಬಾ ಹೋಗೋಣ" ಎಂದ.



## ಮಾಯಾ ಚಕ್ರ (ಹಿಂಬದಿಯ ಚಿತ್ರ ಕಥೆ-೨)

ರಾಕ್ಷಸಿ ಮಾಯವಾಗುತ್ತಲೇ ಆ ದೇವತೆ ಮುಂದಕ್ಕೆ ಬಂದು—"ರಾಜಾ, ನೀನೇನೂ ಭಯಪಡಬೇಡ. ಅಸೂಯೆಯಿಂದ ಆ ರಾಕ್ಷಸಿ ಹೀಗೆ ಮಾಡಿದಳು. ಅಸೂಯೆಗೆ ಅನುರಾಗವೇ ಪ್ರತೀಕಾರವಾಗಿದೆ. ಆದುದರಿಂದ ನಿನ್ನಮೇಲೆ ನಿಜವಾದ ಅನುರಾಗವುಳ್ಳ ಕನ್ಯೆಯನ್ನು ನೀನು ಮದುವೆಮಾಡಿಕೊಂಡೆಯಾದರೆ ನೀನು ಒಂದು ರಾತ್ರಿಯೊಳಗೆ ಶಾಪವಿಮುಕ್ತನಾಗುತ್ತಿ. ಶಾಪವಿಮುಕ್ತಿಯಾಗುವ ವರೆಗೆ ಪತ್ನಿ ನಿನ್ನೊಡನೆ ಮಾತಾಡದಿರಲಿ" ಎಂದು ಹೇಳಿ ಮಾಯವಾದಳು.

ಕೂಡಲೇ ರಾಜನು ಮದುವೆಯಾಗಲು ತಕ್ಕ ಕನ್ಯೆಯರಿಗಾಗಿ ಡಂಗುರ ಸಾರಿಸಿದ. ಡಂಗುರವನ್ನು ಕೇಳಿ ಅನೇಕ ದೇಶಗಳಿಂದ ಅನೇಕಮಂದಿ ಸುಂದರಿಯರಾದ ಕನ್ಯೆಯರು ಬಂದರು. ಎಲ್ಲರಿಗೂ ರಾಜನು ತನ್ನನ್ನೆ ವರಿಸಲಿ ಎಂಬ ಆಸೆಯಿತ್ತು. ಅದಕ್ಕೆ ತಕ್ಕಹಾಗೆ ರಾಜನೂ ಎಲ್ಲಾ ಸುಂದರಿಯರನ್ನೂ ನೋಡಿ, ಮೆಚ್ಚಿದ. ಆದರೆ ರಾಜನ ಕತ್ತೆ ತಲೆಯನ್ನು ನೋಡಿದ ಕೂಡಲೇ, ಕನ್ಯೆಯರೆಲ್ಲಾ ಅಸಹ್ಯಪಟ್ಟುಕೊಂಡು ಬಂದ ದಾರಿಯಲ್ಲೇ ಹಿಂದಿರುಗಿ ಹೋದರು.

ಇನ್ನು ತನಗೆ ಅನುರಾಗಿಣಿಯಾದ ಕನ್ಯೆ ಇಲ್ಲವೆಂದು ಬಗೆದು ರಾಜ ಚಿಂತೆಯಿಂದ ಯೋಚನೆ ಮಾಡುತ್ತಾ ಹೋಗುತ್ತಿದ್ದ. ಹಾಗೆಯೇ ಕೋಟೆಯಬದಿಗೆ ಬಂದ. ಅಲ್ಲಿದ್ದ ಒಂದು ಹೊನ್ನೆಮರದ ಕೆಳಗೆ ಚೆಲುವೆಯಾದ ಹುಡುಗಿಯೊಬ್ಬಳು ನಿಂತು ಲಜ್ಜೆಯಿಂದ ರಾಜನನ್ನೆ ನೋಡುತಿದ್ದಳು. ಬಡವೆಯಾದುದರಿಂದ ಅವಳು ಇತರ ರಾಜಕನ್ಯೆಯರೊಂದಿಗೆ ಮುಂದೆ ಬರಲಿಲ್ಲ.

ರಾಜನು ಅವಳನ್ನು ಪ್ರೀತಿಯಿಂದ ಮಾತಾಡಿಸಿ "ನೀನು ನನ್ನ ರಾಣಿಯಾಗುವಿಯಾ?" ಎಂದು ಕೇಳಿದ. ಅವಳು ಲಜ್ಜಿಸುತ್ತಾ ಒಪ್ಪಿದಳು.

ಕೂಡಲೇ ರಾಜನು ಅವಳನ್ನು ಮದುವೆಯಾಗಲು ತಕ್ಕ ಸಿದ್ಧತೆಗೆ ಪ್ರಾರಂಭಿಸಿದ. ಪರಿಚಾರಕರು ಬಂದು ಅವಳನ್ನು ಅಮೂಲ್ಯ ವಸ್ತ್ರಾಭರಣಗಳಿಂದ ಅಲಂಕರಿಸಿದರು. ನಗರದ ನಡುವಿನ ಆಲಯದಲ್ಲಿ ರಾಜನಿಗೆ ಅವಳೊಡನೆ ವೈಭವವಾಗಿ ಮದುವೆಯಾಯಿತು

ಮದುವೆಯಾದಮೇಲೆ ರಾಜ, ತನ್ನ ಹೊಸಮಡದಿಯನ್ನು ಕುರಿತು: "ನಾಳೆ ಬೆಳಗ್ಗಿನವರೆಗೆ ನನ್ನನ್ನು ಏನೂ ಮಾತಾಡಿಸಬೇಡ. ಆಮೇಲೆ ಎಲ್ಲಾ ಸಂಗತಿ ನಿನಗೇ ತಿಳಿಯುತ್ತದೆ" ಎಂದು ಎಚ್ಚರಿಕೆಕೊಟ್ಟ. ಅವಳೂ ತಲೆಯೊಲಿದು ಒಪ್ಪಿಗೆಯನ್ನು ಸೂಚಿಸಿದಳು. ಆದರೆ—

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1955 ಫಿಬ್ರವರಿ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಡಿಸೆಂಬರ್ 7 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.
ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು – 26.

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ನಿಂತಲ್ಲಿ ನಿಲ್ಲಲಾರೆ

ಎರಡನೇ ಫೋಟೋ: ನಿಂತಲ್ಲಿಂದ ಕದಲಲಾರೆ

ಕಳಿಸಿದವರು : ಕೆ. ಎಲ್. ಎನ್. ಮಲ್ಯ, C/o ನ್ಯೂಭಾರತ್ ಕೇಫ್,
ಶ್ರೀರಾಮ್ ಪೇಟ್, ಕಾಸರಗೋಡು. ದ. ಕ.

ಬಹುಮತಿ ರೂ. 10/–ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.



# ವಾರ್ತೆಗಳು-ವಿಶೇಷಗಳು

**ಸು**ಮಾರು ೨೦೦ ವರ್ಷಗಳಿಂದ ನಮ್ಮ ದೇಶದಲ್ಲಿ ಕೆಲವು ಪ್ರಾಂತಗಳಲ್ಲಿ ಫ್ರೆಂಚಿನವರು ಅಧಿಕಾರ ಚಲಾವಣೆ ಮಾಡಿಕೊಂಡಿದ್ದರು. ಕಳೆದ ಅಕ್ಟೋಬರ್ ತಿಂಗಳ ಅಂತ್ಯದಲ್ಲಿ ಫ್ರೆಂಚ್ ಇಂಡಿಯಾ ಪ್ರಜಾಪ್ರತಿನಿಧಿಗಳು ಕಿಜೂರು ಎಂಬಲ್ಲಿ ಸಮಾವೇಶರಾಗಿ ಪುದುಚೇರಿ, ಕರೆಕಾಲ್, ಮಾಹೆ ಮೊದಲಾದ ಫ್ರೆಂಚಿನವರು ಆಳುತ್ತಿದ್ದ ಪ್ರಾಂತಗಳನ್ನು ಇಂಡಿಯಾದೊಂದಿಗೇ ಸೇರಿಸುವ ನಿರ್ಣಯ ಮಾಡಿದರು. ಇದರೊಂದಿಗೆ ನಮ್ಮ ದೇಶದಲ್ಲಿದ್ದ ಫ್ರೆಂಚರ ಅಧಿಕಾರ ಹೋದಂತೆ.

* * *

**ಕ**ಳೆದ ಅಕ್ಟೋಬರ್ ತಿಂಗಳಲ್ಲಿ ಬೊಂಬಾಯಿಯ ಬಾಲಬಾಲಿಕೆಯರು ಸುಮಾರು ಎರಡುಲಕ್ಷ ಮಂದಿಯಷ್ಟು ಸೇರಿ ಭಾರತ ಪ್ರಧಾನಿ ಪಂಡಿತ ನೆಹರುಗಳನ್ನು ಅಮೋಘ ರೀತಿಯಿಂದ ಸ್ವಾಗತ ಮಾಡಿದರು. "ಚಾಚಾ ನೆಹ್ರೂ ಕೀ ಜೈ" ಎಂದು ಹರ್ಷಧ್ವಾನ ಮಾಡಿದರು. ಶಿವಾಜೀ ಪಾರ್ಕಿನಲ್ಲಿ ಸಭೆ ಜರುಗಿತು. ಆಗೊಮ್ಮೆ ನೆಹ್ರೂ ವೇದಿಕೆಯಿಂದಿಳಿದು ಕೋಲಾಹಲ ಮಾಡುತಿರುವ ಮಕ್ಕಳ ನಡುವೆ ನುಸುಳಿಕೊಂಡರು. ಒಂದು ಗಂಟೆಯವರೆಗೆ ಮಕ್ಕಳ ನೃತ್ಯಗಳೂ, ವ್ಯಾಯಾಮಗಳೂ ಇತರ ಪ್ರದರ್ಶನಗಳೂ ಜರುಗಿದುವು.

* * *

**ಕ**ಳೆದ ಗಾಂಧೀ ಜಯಂತಿಯಂದು ಪ್ರಾರಂಭಿಸಿದ ದೆಹಲಿಯ ಅಂಚೆ ಚೀಟುಗಳ ಪ್ರದರ್ಶನದಲ್ಲಿ, ಪ್ರತಿದಿನ ೫೦೦೦ ಜನರಂತೆ ನೋಡುತ್ತ ಕೌತುಕ ಪಟ್ಟರು. ಟೆಲಿವಿಜನ್ ಯಂತ್ರದ ಪ್ರದರ್ಶನ, ಪಾರಿವಾಳಗಳ ವಾರ್ತಾವಾಹಕತೆ ಇವುಗಳು ನೋಟಕರಿಗೆಲ್ಲಾ ಅತ್ಯಂತ ಕುತೂಹಲಕಾರಿಯಾಗಿದ್ದುವು.

* * *

**ಕೊ**ಲ್ಲಾಪುರ ನಗರದ ಸುಮಾರು ೬೦೦೦ ವಿದ್ಯಾರ್ಥಿಗಳು ನಗರದಲ್ಲೆಲ್ಲಾ ಮೆರವಣಿಗೆ ಹೊರಟು ಉತ್ತರ ಭಾರತದ ನೆರೆಯ ಸಂತ್ರಸ್ತರ ಪರಿಹಾರಕ್ಕಾಗಿ ಹಣವನ್ನೂ, ಬಟ್ಟೆಗಳನ್ನೂ ಸಂಗ್ರಹಿಸಿ ಕೊಟ್ಟಿರುತ್ತಾರೆ.



**ಪ್ರ**ತಿ ವರ್ಷವೂ ಉತ್ತಮ ಬಾಲ ಚಲನ ಚಿತ್ರಕ್ಕೆ ಬಹುಮಾನ ಕೊಡಲು ಭಾರತ ಸರಕಾರವು ನಿರ್ಣಯಿಸಿದೆ. ಉತ್ತಮ ಬಾಲ ಚಿತ್ರಕ್ಕೆ ಭಾರತ ಪ್ರಧಾನ ಮಂತ್ರಿಯ ಪದಕವೊಂದು ಏರ್ಪಾಡಾಗಿದೆ. ಆದರೆ ಒಳ್ಳೆಯ ಚಿತ್ರಗಳು ಇಲ್ಲದುದರಿಂದ ಆ ಪದಕವನ್ನು ಯಾವುದಕ್ಕೂ ಕೊಡಲಿಲ್ಲ. ಉತ್ತಮ ಬಾಲ ಚಿತ್ರನಿರ್ಮಾಣದ ಪ್ರೋತ್ಸಾಹನೆಗಾಗಿ ಢಿಲ್ಲಿಯಲ್ಲಿ ಒಂದು ಸಂಘವನ್ನು ಏರ್ಪಡಿಸಿರುವುದಲ್ಲದೆ ದೇಶದೊಳಗೆಲ್ಲಾ ಅದರ ಶಾಖೆಗಳನ್ನು ಕೂಡಾ ಹರಡಿಸುತ್ತಾರೆ.

*　　*　　*

**ಹೈ**ದರಾಬಾದಿಗೆ ೬೭ ಮೈಲು ದೂರದಲ್ಲಿ ಜನತಾ ಕಾಲೇಜು ಎಂಬ ಸಂಸ್ಥೆಯನ್ನು ತೆರೆದಿದ್ದಾರೆ. ೧೫ – ೨೫ರೊಳಗಿನ ತರುಣರಿಗೆ, ಸಮಾಜ ಶಿಕ್ಷಣ ಕೇಂದ್ರಗಳ ಮೇಲ್ವಿಚಾರಣೆಯನ್ನು ಕೊಡುವುದೇ ಈ ಹೊಸ ಕಾಲೇಜಿನ ಉದ್ದೇಶವಾಗಿದೆ.

*　　*　　*

**ಲೋ**ಕ ಸಭೆಯಲ್ಲಿ ಯೋಜನಾ ಸಚಿವರು, ಕಳೆದ ನೆರೆಯ ಪರಿಸ್ಥಿತಿಯನ್ನು ಯುದ್ಧ ಕಾಲದ ಪರಿಸ್ಥಿತಿಯಂತೆ ಭಾವಿಸಲಾಗುವುದೆಂದೂ, ನೆರೆಯ ನೀರು ಹರಿದು ಹೋಗುವಂತೆ ಕಾಲುವೆಗಳನ್ನು ತೆಗೆಯುವುದೇ ರಕ್ಷಣೆಯ ಮುಖ್ಯ ಯತ್ನವೆಂದೂ ತಿಳಿಸಿರುತ್ತಾರೆ.

**ಕಾ**ಶಿಗೆ ೧೪ ಮೈಲು ದೂರವಿರುವ ಗಂಗಾ ನದಿಯ ಬದಿಯಲ್ಲಿದ್ದ ಮೂರು ಹಳ್ಳಿಗಳು ಪ್ರವಾಹದ ಸೆಳೆತಕ್ಕೆಸಿಕ್ಕಿ ನೆಲಸಮವಾಗಿವೆ.

*　　*　　*

**ಬೊಂ**ಬಾಯಿಯ ಚಲಚಿತ್ರ ಕಲಾವಿದರು ಆಸಾಮ, ಪಶ್ಚಿಮ ಬಂಗಾಲ ಮತ್ತು ಬಿಹಾರದ ನೆರೆಯಾರ್ತರ ಸಹಾಯಕ್ಕಾಗಿ ಸುಮಾರು ೬೦,೦೦೦ ರೂಪಾಯಿ ಸಂಗ್ರಹಿಸಿದ್ದಲ್ಲದೆ, ತಾವೂ ೩೨,೦೦೦ ರೂಪಾಯಿಗಳನ್ನು ಚಂದಾರೂಪದಲ್ಲಿ ಕೊಟ್ಟಿದ್ದಾರೆ.

*　　*　　*

**ಕ**ಳೆದ ಮಹಾ ಯುದ್ಧದ ಕಾಲದಲ್ಲಿ ತೆಗೆದು ಹಾಕಲಾಗಿದ್ದ ಉತ್ತರ ರೈಲ್ವೇಯ ೬೭ ಮೈಲಿ ಉದ್ದದ ಉನಾವೊ-ಮಾಘೋಗಂಜ್-ಬಲಾಂ ರೈಲ್ವೇ ಮಾರ್ಗವನ್ನು ಕಳೆದ ಸೆಪ್ಟೆಂಬರ್‌ನಲ್ಲಿ ಮತ್ತೆ ಪ್ರಾರಂಭಿಸಿದ್ದಾರೆ. ಇದು ಈ ಪ್ರಾಂತದ ಕೈಗಾರಿಕೆ, ವ್ಯವಸಾಯಗಳಿಗೆ ತುಂಬ ಸಹಾಯಕವಾಗಿವೆ.

*　　*　　*

**ಈ**ಚೆಗೆ ಜಪಾನು ಸಮುದ್ರದಲ್ಲಿ ಎದ್ದ ಭಯಂಕರ ತುಫಾನಿನಿಂದ ೮೭೬ ಹಡಗುಗಳು ಮುಳುಗಿದುವು. ೩೪೭೬ ಹಡಗುಗಳು ನಷ್ಟವಾದುವು. ಸಾವಿರಕ್ಕೂ ಮಿಕ್ಕಿ ಪ್ರಯಾಣಿಕರು ಸಮುದ್ರಪಾಲಾದರು.



# ಚಿತ್ರ ಕಥೆ



ವಾಸುವೂ ಗೋಪಿಯೂ ಕೂಡಿ ಒಂದು ಹಳೆಯ ಸ್ಪ್ರಿಂಗನ್ನು ಸಂಪಾದಿಸಿಬಿಟ್ಟರು. ಅದನ್ನು ಚಕ್ಕೆಗಳಿಗೆ ಬಿಗಿದುಕೊಂಡು ಕಾಲಿಗೆ ಕಟ್ಟಿಕೊಂಡು ಮೇಲೆಹಾರ ತೊಡಗಿದ ಗೋಪಿ. ನೋಡುತ್ತಾನಿಂತ ವಾಸು— "ಹಾಗಲ್ಲೋ! ಮುಂದೆಹಾರು ನೋಡುವಾ" ಅಂತ ಹುರುಪುಗೊಳಿಸಿದ.




ಉತ್ಸಾಹದಿಂದ ಮುಂದಕ್ಕೆ ಹಾರಿಬಿಟ್ಟ ಗೋಪಿ. ಆ ಹಾರಿಕೆಗೆ ಇದಿರಾಗಿ ಬರುತ್ತಿದ್ದ ಒಬ್ಬ ಹಣ್ಣುಮಾರುವವನಮೇಲೆ ಢಿಕ್ಕೀಕೊಟ್ಟ. ಕೆಳಗೆಬಿದ್ದ ಆ ಬಡ ಹಣ್ಣಿನವ ಎದ್ದೇಳುವುದರೊಳಗೆ ಇಬ್ಬರೂ ಓಟಾಕಿತ್ತರು. ಅವನ ಹಣ್ಣುಗಳು ಜಜ್ಜಿದುವು; ಇವನ ಸ್ಪ್ರಿಂಗು ಮುರಿಯಿತು. ಏನು ತುಂಟರಪ್ಪ!

Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26. Controlling Editor: SRI 'CHAKRAPANI'

Photo by B. Bhansali



ಬಹುಮಾನ ಪಡೆದ ಶೀರ್ಷಿಕೆ

ನಿಂತಲ್ಲಿಂದ ಕದಲಲಾರೆ

ಕಳಿಸಿದವರು : ಕೆ. ಎಲ್. ಎಸ್. ಮಲ್ಯ

